**Schedule - A**

**1) Bommasandra, 2) Kithiganahalli, 3) banahalli**

**Schedule- B**

Bommasandra grama panchayath consists of three villages 1) Bommasandra 2) Kithiganahalli 3) Banahalli Starting from Bommasandra village towords east Heelalige village thippaiah lake South facing Heelalige Boundry Continuing SY No: 148,149,155,154,156,160,165,175,185,188,189,190, 191,192,193,197 Yellow zone continuing towords Cholarakkatte lake Boundry Continuing towords Yallamma nagara SY NO : 201 that reaches NH-7 From thre it is Noted as Kithiganahalli village SY NO : 47,48,49 of Banahalli village Behind Keerthana Hotel Continuing Towords Swamy Vivekananda Educational Institution behind we come across Nagi reddy Layout of anekal main road Continuing SY NO :91 from there we reach to Sy No :91,92,7,8,9,11, 114 Surya City (KHB) From there continuing we reach SY NO 10,19,20,22 it is Iggaluru Boundary of Chandapura village panchayath Coutinuing Main road We come Across Banahalli village Sorounded By Sy NO 48,49,52 Coutinuing towords Kithiganahalli village SY NO : 97,98,99,100 and reaches Hennagara main road it is Noted as South Border Coutinuing towords Right West Facing Coutinuing towords SY NO 101, Formed Layout Continuing Sy No : 102,103,104,105,106, 115,116,117,118,120,121,124, 125,126,127 OF Rainbow Residency Layout Continuing towords Bommasandra We come across Cloud -9 Residency Layout and reaches attikere lake continuing few yard towords left Side we come across Bommasandra industrial area sy no 257,308,307,306,305,which is industrial converted continuing industrial area we reaches yarandalli dinne which is westboundary continuing north facing we reach jigani link road continuing we reach hebbagodi industrial area limit continuing towards E in international main road towards left police quarters opposite road our limit banglapet shri anjeneya swamy temple which is kamasandra lake border continuing we reach r s garden sorounded by daddys layout and bommosandra lake which is north boundary and continuing towards bommasandra khane sy no78,79,106,107,109,110 it is andhapura lake continuing sy no 131,137,139 continuing we reach Sc community grave yard attached to chanakya granite heelalige main road it is said to be East boundary (thippaiah lake)

**SIDDIQ PASHA**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (100 ಪ್ರತಿಗಳು)

. fdRNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– III | ಬೆಂಗಳೂರು, ಗುರುವಾರ, ಏಪ್ರಿಲ್ ೩೦, ೨೦೧೫ (ವೈಶಾಖ ೧೦, ಶಕ ವರ್ಷ ೧೯೩೭) | ನಂ. ೪೧೯ |
|---|---|---|
| Part– III | Bengaluru, Thursday, April 30, 2015 (Vaishakha 10, Shaka Varsha 1937) | No. 419 |


ನಗರಾಭಿವೃದ್ಧಿ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ನಅಇ 45 ಎಂಎಲ್‌ಆರ್ 2015, ಬೆಂಗಳೂರು, ದಿನಾಂಕ: 30–04–2015**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 349 ನೇ ಪ್ರಕರಣದೊಂದಿಗೆ ಓದಿಕೊಂಡ 9 ಮತ್ತು 355–ಬಿ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ ಅಂದರೆ:–

i. ಅಂಥ ಪ್ರದೇಶದ ಜನಸಂಖ್ಯೆ ಹತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಇಪ್ಪತ್ತು ಸಾವಿರಕ್ಕಿಂತ ಹೆಚ್ಚಿಲ್ಲದ;

ii. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ನಾಲ್ಕುನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು:–

iii. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು ಪರಿವರ್ತನಾ ಪ್ರದೇಶವೆಂಬುದಾಗಿ ಹಾಗೆ ನಿರ್ದಿಷ್ಟಪಡಿಸತಕ್ಕದಲ್ಲ.

ಅನುಸೂಚಿ–ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಅನುಸೂಚಿ–ಎ ರಲ್ಲಿನ ವಿಜಯಪುರ ಜಿಲ್ಲೆ ಕೋಲ್ಹಾರ ಪಂಚಾಯಿತಿ ಪ್ರದೇಶವನ್ನು ಈ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನದಿಂದ ಜಾರಿಗೆ ಬರುವಂತೆ ಕೋಲ್ಹಾರ 'ಪರಿವರ್ತನಾ ಪ್ರದೇಶ' ವೆಂದು ಉದ್ಘೋಷಿಸಿ ಸದರಿ ಪರಿವರ್ತನಾ ಪ್ರದೇಶವನ್ನು 'ಕೋಲ್ಹಾರ ಪಟ್ಟಣ ಪಂಚಾಯಿತಿ' ಯ ಪ್ರದೇಶವೆಂದು ಸಹ ಪದನಾಮೀಕರಿಸಿರುತ್ತಾರೆ.

ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಪ್ರಕರಣ 351ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಕೋಲ್ಹಾರ ಪರಿವರ್ತಿತ ಪ್ರದೇಶಕ್ಕೆ "ಪಟ್ಟಣ ಪಂಚಾಯಿತಿ"ಯನ್ನು ಸ್ಥಾಪಿಸಲಾಗಿದೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಅಧಿಸೂಚನೆಯ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, 9ನೇ ಮಹಡಿ, ವಿ.ವಿ.ಗೋಪುರ, ಬೆಂಗಳೂರು. ಇವರಿಗೆ ಸಲ್ಲಿಸಬೇಕೆಂದು ಹಾಗೂ ಈ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ನಿಗದಿತ ಸಮಯದಲ್ಲಿ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**<u>ಅನುಬಂಧ–ಎ</u>**

ಕೊಲ್ಹಾರ

**ಅನುಬಂಧ–ಬಿ**

ಕೊಲ್ಹಾರ ಗ್ರಾಮದ ಉತ್ತರ ಭಾಗದಲ್ಲಿರುವ ಸ.ನಂ. 57, 58, 59, 60, 61 ರ ಉತ್ತರ ಗಡಿಯೊಂದಿಗೆ ಪೂರ್ವಕ್ಕೆ ಹೊರಟು ಸ.ನಂ.61ರ ಈಶಾನ್ಯ ಭಾಗದಲ್ಲಿ ಉತ್ತರಕ್ಕೆ ತಿರುಗಿ ಸ.ನಂ. 94, 95ರ ಪಶ್ಚಿಮ ಗಡಿಯೊಂದಿಗೆ ಉತ್ತರಕ್ಕೆ ಹೊರಟು ಸ.ನಂ. 95ರ ವಾಯುವ್ಯ ಭಾಗದಲ್ಲಿ ಪೂರ್ವಕ್ಕೆ ತಿರುಗಿ ಸದರಿ ಸ.ನಂ. ದ ಉತ್ತರದ ಗಡಿಯೊಂದಿಗೆ ಪೂರ್ವಕ್ಕೆ ಹೊರಟು ಸದರ ಸ.ನಂ. ನ ಈಶಾನ್ಯ ಭಾಗದಲ್ಲಿ ದಕ್ಷಿಣಕ್ಕೆ ತಿರುಗಿ ಸ.ನಂ. 95, 94 ರ ಪೂರ್ವದ ಗಡಿಯೊಂದಿಗೆ ದಕ್ಷಿಣಕ್ಕೆ ಸಾಗಿ ಮುಂದುವರೆದು ಸ.ನಂ. 93,

92, 91, 90, 88, 87, 86, 82 ರ ಮಧ್ಯಭಾಗದಲ್ಲಿ ದಕ್ಷಿಣಕ್ಕೆ ಹೊರಟು ಮುಂದುವರೆದು ಸ.ನಂ. 81ರ ಪೂರ್ವದ ಗಡಿಯೊಂದಿಗೆ ದಕ್ಷಿಣಕ್ಕೆ ಹೊರಟು ಸ.ನಂ. 81 ರ ಆಗ್ನೇಯ ಭಾಗದಲ್ಲಿ ಪಶ್ಚಿಮಕ್ಕೆ ತಿರುಗಿ ಸರ್ವೆ ನಂ 81, 80 ರ ದಕ್ಷಿಣದ ಗಡಿಯೊಂದಿಗೆ ಪಶ್ಚಿಮಕ್ಕೆ ಹೊರಟು ಸರ್ವೆನಂ 80 ರ ಮಧ್ಯಭಾಗದಲ್ಲಿ ದಕ್ಷಿಣಕ್ಕೆ ತಿರುಗಿ ಸ.ನಂ. 69,68,39,40,31,17/2,234,233ರ ಪೂರ್ವದ ಗಡಿಯೊಂದಿಗೆ ದಕ್ಷಿಣಕ್ಕೆ ಹೊರಟು ಸ.ನಂ. 233ರ ಆಗ್ನೇಯ ಭಾಗದಲ್ಲಿ ತಿರುಗಿ ಪಶ್ಚಿಮಕ್ಕೆ ಹೊರಟು ಸರ್ವೆ ನಂ. 233ರ ಮಧ್ಯಭಾಗದಲ್ಲಿ ದಕ್ಷಿಣಕ್ಕೆ ತಿರುಗಿ ಸ.ನಂ. 232ರ ಪೂರ್ವದ ಗಡಿಯೊಂದಿಗೆ ದಕ್ಷಿಣಕ್ಕೆ ಹೊರಟು ಸ.ನಂ. 232ರ ಆಗ್ನೇಯ ಭಾಗದಲ್ಲಿ ಪಶ್ಚಿಮಕ್ಕೆ ತಿರುಗಿ ದಕ್ಷಿಣದ ಗಡಿಯೊಂದಿಗೆ ಪಶ್ಚಿಮಕ್ಕೆ ಸಾಗಿ ಸ.ನಂ. 271ರ ಮಧ್ಯದಲ್ಲಿ ದಕ್ಷಿಣಕ್ಕೆ ತಿರುಗಿ 271ರ ಪೂರ್ವದ ಗಡಿಯೊಂದಿಗೆ ಸಾಗಿ ಆಗ್ನೇಯ ಭಾಗದಲ್ಲಿ ಪಶ್ಚಿಮಕ್ಕೆ ತಿರುಗಿ 271ರ ದಕ್ಷಿಣದ ಗಡಿಯೊಂದಿಗೆ ಪಶ್ಚಿಮಕ್ಕೆ ಸಾಗಿ ಸ.ನಂ. 244ರ ನೈರುತ್ಯದ ಮೂಲೆಯಲ್ಲಿ ಉತ್ತರಕ್ಕೆ ತಿರುಗಿ ಅದೇ ಸ.ನಂ. ನ ಪಶ್ಚಿಮದ ಗಡಿಯೊಂದಿಗೆ ಉತ್ತರಕ್ಕೆ ಹೊರಟು ಸ.ನಂ.240ರ ಮಧ್ಯಭಾಗದಲ್ಲಿ ಪಶ್ಚಿಮಕ್ಕೆ ತಿರುಗಿ ಸರ್ವೆ ನಂ. 240, 241, 17/1 ರ ದಕ್ಷಿಣದ ಗಡಿಯೊಂದಿಗೆ ಪಶ್ಚಿಮಕ್ಕೆ ಸಾಗಿ ಸ.ನಂ. 17/1 ರ ನೈರುತ್ಯದ ಮೂಲೆಯಲ್ಲಿ ಉತ್ತರಕ್ಕೆ ತಿರುಗಿ ಅದೇ ಸ.ನಂ ನ ಪಶ್ಚಿಮದ ಗಡಿಯೊಂದಿಗೆ ಉತ್ತರಕ್ಕೆ ಹೊರಟು ಸ.ನಂ. 19ರ ದಕ್ಷಿಣದ ಗಡಿಯ ಮಧ್ಯಭಾಗದಲ್ಲಿ ಪಶ್ಚಿಮಕ್ಕೆ ತಿರುಗಿ ಅದೇ ಸರ್ವೆ ನಂ ನ ದಕ್ಷಿಣದ ಗಡಿಯೊಂದಿಗೆ ಪಶ್ಚಿಮಕ್ಕೆ ಸಾಗಿ ಅದೇ ಸರ್ವೆ ನಂನ ನೈರುತ್ಯ ಮೂಲೆಯಲ್ಲಿ ಉತ್ತರಕ್ಕೆ ತಿರುಗಿ ಸ.ನಂ. 19, 22ರ ಪಶ್ಚಿಮದ ಗಡಿಯೊಂದಿಗೆ ಉತ್ತರಕ್ಕೆ ಸಾಗಿ ಸ.ನಂ. 23ರ ಮಧ್ಯಭಾಗದಲ್ಲಿ ಹಾಯ್ದುಹೋದ ಹಳೆ ಕೊಲ್ಹಾರದಿಂದ ಹೀರೆ ಗರಸಂಗಿಗೆ ಹೋಗುವ ರಸ್ತೆಯನ್ನು ಕೂಡಿಕೊಂಡು ಮುಂದೆ ಸಾಗಿ ಸ.ನಂ. 978/1 ರ ಆಗ್ನೇಯ ಮೂಲೆಯಲ್ಲಿ ಪಶ್ಚಿಮಕ್ಕೆ ತಿರುಗಿ ಅದೇ ಸ.ನಂ. ನ ದಕ್ಷಿಣದ ಗಡಿಯೊಂದಿಗೆ ಸಾಗಿ ಅದೇ ಸ.ನಂ ನ ನೈರುತ್ಯ ಮೂಲೆಯಲ್ಲಿ ಉತ್ತರಕ್ಕೆ ತಿರುಗಿ ಪಶ್ಚಿಮದ ಗಡಿಯೊಂದಿಗೆ ಮುಂದೆ ಸಾಗಿ ಅದೇ ಸ.ನಂ. ನ ಮಧ್ಯಭಾಗದಲ್ಲಿ ಪಶ್ಚಿಮಕ್ಕೆ ತಿರುಗಿ ಸ.ನಂ. 955ರ ದಕ್ಷಿಣದ ಗಡಿಯೊಂದಿಗೆ ಮುಂದೆ ಸಾಗಿ ಮಧ್ಯ ಭಾಗದಲ್ಲಿ ಉತ್ತರಕ್ಕೆ ತಿರುಗಿ ಸ.ನಂ. 955/1, 965, 968ರ ಪಶ್ಚಿಮದ ಗಡಿಯೊಂದಿಗೆ ಉತ್ತರಕ್ಕೆ ಸಾಗಿ 968ರ ವಾಯುವ್ಯ ಮೂಲೆಯಲ್ಲಿ ಪೂರ್ವಕ್ಕೆ ತಿರುಗಿ ಸ.ನಂ. 968,967ರ ಉತ್ತರ ಗಡಿಯೊಂದಿಗೆ ಪೂರ್ವಕ್ಕೆ ಸಾಗಿ 218 ರಾಷ್ಟ್ರೀಯ ಹೆದ್ದಾರಿಯನ್ನು ದಾಟಿ ಸರ್ವೆ. ನಂ. 970ರ ಮಧ್ಯಭಾಗದಲ್ಲಿ ಹಾಯ್ದು ಸ.ನಂ. 975ರ ಉತ್ತರದ ಗಡಿಯೊಂದಿಗೆ ಪೂರ್ವಕ್ಕೆ ಸಾಗಿ ಸ.ನಂ. 974ರ ಮಧ್ಯಭಾಗದಲ್ಲಿ ಉತ್ತರಕ್ಕೆ ತಿರುಗಿ ಸ.ನಂ. 973ರ ಪಶ್ಚಿಮದ ಗಡಿಯೊಂದಿಗೆ ಉತ್ತರಕ್ಕೆ ಸಾಗಿ ಅದೇ ಸ.ನಂ.ನ ವಾಯುವ್ಯ ಭಾಗದಲ್ಲಿ ಪೂರ್ವಕ್ಕೆ ತಿರುಗಿ ಸ.ನಂ. 973ರ ಉತ್ತರ ಗಡಿಯೊಂದಿಗೆ ಪೂರ್ವಕ್ಕೆ ಹೊರಟು ಹಿರೇ ಗರಸಂಗಿ ರಸ್ತೆಯನ್ನು ದಾಟಿ ಗ್ರಾಮದ ಉತ್ತರ ಭಾಗದಲ್ಲಿರುವ ಸ.ನಂ. 57ರ ವಾಯುವ್ಯ ಮೂಲೆಯಲ್ಲಿ ಉತ್ತರದ ಗಡಿಯನ್ನು ಹೊಂದಿಕೊಂಡಿರುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**URBAN DEVELOPMENT SECRETARIAT**
**NOTIFICATION**
**No. UDD 45 MLR 2015, Bengaluru, Dated: 30-04-2015**

In exercise of the power conferred under Section 349 read with section 9 and 355-B of the Karnataka Municipalities Act 1964, the 'Panchayat Area' of Kolhar, Vijayapura District, mentioned in Schedule "A" along with boundaries mentioned in Schedule "B" hereby declared as the "Transitional Area" of Kolhar and further specify such Transitional area to be the "Town Panchayat Area" of Kolhar with effect from the date of publishing this Notification in the Official Gazette by the Governor of Karnataka having regard to:

i. The population of such area is not less than ten thousand and not more than Twenty thousand;
ii. The density of population in such area is not less than four hundred inhabitants to one square kilometer of area;
iii. The percentage of employment in non-agricultural activities is not less than fifty per cent of the total employment;

In exercise of the power conferred under Section 351 of the Karnataka Municipalities Act, Town Panchayat is constituted for the said "Transitional area" of Kolhar.

The notification is hereby published for the information to public. All the persons, who would like to file any objections/suggestions to this notification are hereby required to submit the same with reasons therefore in writing to the Director, Directorate of Municipal Administration, 9th floor, V.V.Tower, Bangalore within 30 days from publication of this notification in the official gazette. Further notification will be taken for final consideration after the said 30 days.

By Order and in the name of the Governor of Karnataka

**SIDDIQ PASHA**
Under Secretary to Government
Urban Development Department

**SCHEDULE-A**

Kolhar village

**SCHEDULE-B**

Towards north border of Kolhar village Sy.Nos 57,58,59,60,61 Going towards east of this land and towards north east of Sy. No. 61 and towards west of Sy.No.94 and 95 and north east of 95 turning to east in north border going east and in north west towards south in Sy.No.95,94 moving towards south in east and moving in middle of 93,92,91,90,88,82 moving towards south moving towards south in eastern border of Sy.No.81 and moving towards easter of south east in 81.80 and in middle of Sy. No.80 towards south and in Sy.No.69,68,39,40,31,17/2,234,233 moving south in eastern border in towards west in Sy.No. 233 in moving towards west in middle of 233 and moving towards south in east border of 232 in turning towards west south border of 271 moving towards west in south border and north east towards north and in middle of 244 towards west and in Sy.No. s 240, 241,17/1 in south border towards west and in Sy.No. 17/1 towards north in Sy.No. 19 towards west in South border towards west and then to Sy.No.19,22, moving towards north in western border in Sy.No.23 going middle reaching Old Kolhar Hire Garasangi Road and then moving towards west and going in south border and then moving western border going forward in south border in Sy.No.955/1, 955,968,967 moving towards east in north border and crossing 218 National High Way passing in the middle of 970 and in north border towards east and in middle of Sy.No. 974 towards north and moving towards north in western border and in the same survey north west moving towards east in Sy.No. 973 towards east in north border and crossing the Hire Garasangi road land in north side of the village that is Sy.No. 57 moving towards north in north east corner and it has north border.

**SIDDIQ PASHA**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (100 ಪ್ರತಿಗಳು)

. fdRNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಗುರುವಾರ, ಏಪ್ರಿಲ್ ೩೦, ೨೦೧೫ (ವೈಶಾಖ ೧೦, ಶಕ ವರ್ಷ ೧೯೩೭) | ನಂ. ೪೨೦ |
|---|---|---|
| Part– III | Bengaluru, Thursday, April 30, 2015 (Vaishakha 10, Shaka Varsha 1937) | No. 420 |

ನಗರಾಭಿವೃದ್ಧಿ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ನಅಇ 49 ಎಂಎಲ್‌ಆರ್ 2015, ಬೆಂಗಳೂರು, ದಿನಾಂಕ: 30–04–2015**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 349 ನೇ ಪ್ರಕರಣದೊಂದಿಗೆ ಓದಿಕೊಂಡ 9 ಮತ್ತು 355–ಬಿ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ ಅಂದರೆ:–

i. ಅಂಥ ಪ್ರದೇಶದ ಜನಸಂಖ್ಯೆ ಹತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಇಪ್ಪತ್ತು ಸಾವಿರಕ್ಕಿಂತ ಹೆಚ್ಚಿಲ್ಲದ;

ii. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ನಾಲ್ಕುನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು:–

iii. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು ಪರಿವರ್ತನಾ ಪ್ರದೇಶವೆಂಬುದಾಗಿ ಹಾಗೆ ನಿರ್ದಿಷ್ಟಪಡಿಸತಕ್ಕದಲ್ಲ.

ಅನುಸೂಚಿ–ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಅನುಸೂಚಿ–ಎ ರಲ್ಲಿನ ಬಾಗಲಕೋಟೆ ಜಿಲ್ಲೆಯ ಬೆಳಗಲಿ ಗ್ರಾಮ ಪಂಚಾಯಿತಿ ಪ್ರದೇಶವನ್ನು ಈ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನದಿಂದ ಜಾರಿಗೆ ಬರುವಂತೆ ಬೆಳಗಲಿ 'ಪರಿವರ್ತನಾ ಪ್ರದೇಶ' ವೆಂದು ಉದ್ಘೋಷಿಸಿ ಸದರಿ ಪರಿವರ್ತನಾ ಪ್ರದೇಶವನ್ನು 'ಬೆಳಗಲಿ ಪಟ್ಟಣ ಪಂಚಾಯಿತಿ'ಯ ಪ್ರದೇಶವೆಂದು ಸಹ ಪದನಾಮೀಕರಿಸಿರುತ್ತಾರೆ.

ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಪ್ರಕರಣ 351ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಬೆಳಗಲಿ ಪರಿವರ್ತಿತ ಪ್ರದೇಶಕ್ಕೆ "ಪಟ್ಟಣ ಪಂಚಾಯಿತಿ"ಯನ್ನು ಸ್ಥಾಪಿಸಲಾಗಿದೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಅಧಿಸೂಚನೆಯ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, 9ನೇ ಮಹಡಿ, ವಿ.ವಿ.ಗೋಪುರ, ಬೆಂಗಳೂರು. ಇವರಿಗೆ ಸಲ್ಲಿಸಬೇಕೆಂದು ಹಾಗೂ ಈ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ನಿಗದಿತ ಸಮಯದಲ್ಲಿ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅನುಸೂಚಿ "ಎ"**

ಬೆಳಗಲಿ

**ಅನುಸೂಚಿ "ಬಿ"**

**ಪೂರ್ವಕ್ಕೆ** ಮುಗಳಖೋಡ ಗ್ರಾಮದ ಸರಹದ್ದು ಬರುತ್ತದೆ ಮತ್ತು ಮಹಾಲಿಂಗಪೂರ ಮುಧೋಳ ಮುಖ್ಯ ರಸ್ತೆ ಹಾದು ಹೋಗಿದೆ. ಉತ್ತರ ದಕ್ಷಿಣ ರಿ.ಸ.ನಂ.ಗಳು 260, 261, 262, 258, 257, 321, 322, 324, 327, 328, 329, 333, 334, 336, 421, 422, 423, 424, 425, 426, 427, 428 ಗಡಿ ಕೊನೆಗೊಳ್ಳುತ್ತದೆ.

**ಪಶ್ಚಿಮಕ್ಕೆ** ಮಹಾಲಿಂಗಪೂರ ಪುರಸಭೆ ಸರಹದ್ದು ಬರುತ್ತದೆ ಮತ್ತು ದಕ್ಷಿಣಕ್ಕೆ ರಿ.ಸ.ನಂ.ಗಳು 535, 534, 533, 532, 547, 549, 554, 558, 557, 582, 578, 577, 576, 67, 73, 74, 76, 78, 107, 106 ಗಡಿ ಕೊನೆಗೊಳ್ಳುತ್ತದೆ.

**ಉತ್ತರ** ದಿಕ್ಕಿಗೆ ಜಗದಾಳ ನಾವಲಗಿ ಸರಹದ್ದಿನ ರಿ.ಸ.ನಂ.ಗಳು ಬರುತ್ತವೆ ಪೂರ್ವ ಪಶ್ಚಿಮ ರಿ.ಸ.ನಂ.ಗಳು 107, 116, 117, 118, 126, 127, 128, 129, 226, 227, 231, 236, 237, 239, 246, 247, 250 ಗಡಿ ಕೊನೆಗೊಳ್ಳುತ್ತದೆ.

**ದಕ್ಷಿಣ** ದಿಕ್ಕಿಗೆ ಅಕ್ಕಿಮರಡಿ ಮತ್ತು ನಾಗರಾಳ ರಿ.ಸ.ನಂ.ಗಳು ಬರುತ್ತವೆ ನಾಗರಾಳ, ಅಕ್ಕಿಮರಡಿ, ನಂದಗಾಂವ ಗ್ರಾಮಕ್ಕೆ ರಸ್ತೆ ಸಂಪರ್ಕಇದೆ. ಪೂರ್ವ ಪಶ್ಚಿಮ ರಿ.ಸ.ನಂ.ಗಳು 537, 483, 482, 475, 450, 443, 442, 441, 439, 435, 434, 433, 431, 430, 429 ಈ ರೀತಿ ಗಡಿ ಕೊನೆಗೊಳ್ಳುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**URBAN DEVELOPMENT SECRETARIAT**
**NOTIFICATION**
**No. UDD 49 MLR 2015, Bengaluru, Dated: 30-04-2015**

In exercise of the power conferred under Section 349 read with section 9 and 355-B of the Karnataka Municipalities Act 1964, the 'Panchayat Area' of Belagali, Bagalkot District, mentioned in Schedule "A" along with boundaries mentioned in Schedule "B" hereby declared as the "Transitional Area" of Belagali and further specify such Transitional area to be the "Town Panchayat Area" of Belagali with effect from the date of publishing this Notification in the Official Gazette by the Governor of Karnataka having regard to:

i. The population of such area is not less than ten thousand and not more than Twenty thousand;
ii. The density of population in such area is not less than four hundred inhabitants to one square kilometer of area;
iii. The percentage of employment in non-agricultural activities is not less than fifty per cent of the total employment;

In exercise of the power conferred under Section 351 of the Karnataka Municipalities Act, Town Panchayat is constituted for the said "Transitional area" of Belagali.

The notification is hereby published for the information to public. All the persons, who would like to file any objections/suggestions to this notification are hereby required to submit the same with reasons therefore in writing to the Director, Directorate of Municipal Administration, 9th floor, V.V.Tower, Bangalore within 30 days from publication of this notification in the official gazette. Further notification will be taken for final consideration after the said 30 days.

By Order and in the name of the Governor of Karnataka

**SIDDIQ PASHA**
Under Secretary to Government
Urban Development Department

**SCHEDULE-A**
BELAGALI
**SCHEDULE-B**

**East** Side Mugalakhod village boundary and Mahalingpur Mudhol Main Road passes, North, South R.S.No.s 260,261, 262, 258, 257, 321, 322, 324, 327, 328, 329,333, 334, 336, 421, 422, 423, 424, 425, 426, 427, 428 boundary ended.

**West** Side Mahalingpur town municipal corporation boundry and South side R.S.No.s 535, 534, 533, 532, 547, 549, 554, 558, 557, 582, 578, 577, 576, 67, 73, 74, 76, 78, 107, 106 boundry ended.

**North** Side Jagadal-Navalagi boundries R.S.No.s 107, 116, 117, 118, 126, 127, 128, 129, 226, 227, 231, 236, 237, 239, 239, 246, 247, 250 boundry ended.

**South** side Akkimaradi and Nagaral R.S.No.s comes, Nagaral, Akkimaradi and Nandaganv road contacts. East West R.S.No.s 537, 483, 482, 475,450, 443, 442, 441, 439, 435.

**SIDDIQ PASHA**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (೧೦೦ ಪ್ರತಿಗಳು)

. fdRNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ– III | ಬೆಂಗಳೂರು, ಗುರುವಾರ, ಏಪ್ರಿಲ್ ೩೦, ೨೦೧೫ (ವೈಶಾಖ ೧೦, ಶಕ ವರ್ಷ ೧೯೩೭) | ನಂ. ೪೨೧ |
|---|---|---|
| Part– III | Bengaluru, Thursday, April 30, 2015 (Vaishakha 10, Shaka Varsha 1937) | No. 421 |



ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ನಅಇ 16 ಎಂಎಲ್‌ಆರ್ 2015, ಬೆಂಗಳೂರು, ದಿನಾಂಕ: 30–04–2015**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 349 ನೇ ಪ್ರಕರಣದೊಂದಿಗೆ ಓದಿಕೊಂಡ 9 ಮತ್ತು 355–ಬಿ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ ಅಂದರೆ:–

i. ಅಂಥ ಪ್ರದೇಶದ ಜನಸಂಖ್ಯೆ ಹತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಇಪ್ಪತ್ತು ಸಾವಿರಕ್ಕಿಂತ ಹೆಚ್ಚಿಲ್ಲದ;

ii. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ನಾಲ್ಕುನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು:–

iii. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು ಪರಿವರ್ತನಾ ಪ್ರದೇಶವೆಂಬುದಾಗಿ ಹಾಗೆ ನಿರ್ದಿಷ್ಟಪಡಿಸತಕ್ಕದಲ್ಲ.

ಅನುಸೂಚಿ–ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಅನುಸೂಚಿ–ಎ ರಲ್ಲಿನ ಕೊಪ್ಪಳ ಜಿಲ್ಲೆಯ ತಾವರಗೆರ ಪಂಚಾಯಿತಿ ಪ್ರದೇಶವನ್ನು ಈ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನದಿಂದ ಜಾರಿಗೆ ಬರುವಂತೆ ತಾವರಗೆರ 'ಪರಿವರ್ತನಾ ಪ್ರದೇಶ' ವೆಂದು ಉದ್ಘೋಷಿಸಿ ಸದರಿ ಪರಿವರ್ತನಾ ಪ್ರದೇಶವನ್ನು 'ತಾವರಗೆರ ಪಟ್ಟಣ ಪಂಚಾಯಿತಿ' ಯ ಪ್ರದೇಶವೆಂದು ಸಹ ಪದನಾಮೀಕರಿಸಿರುತ್ತಾರೆ.

ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಪ್ರಕರಣ 351ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ತಾವರಗೆರ ಪರಿವರ್ತಿತ ಪ್ರದೇಶಕ್ಕೆ "ಪಟ್ಟಣ ಪಂಚಾಯಿತಿ"ಯನ್ನು ಸ್ಥಾಪಿಸಲಾಗಿದೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಅಧಿಸೂಚನೆಯ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, 9ನೇ ಮಹಡಿ, ವಿ.ವಿ.ಗೋಪುರ, ಬೆಂಗಳೂರು. ಇವರಿಗೆ ಸಲ್ಲಿಸಬೇಕೆಂದು ಹಾಗೂ ಈ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ನಿಗದಿತ ಸಮಯದಲ್ಲಿ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅನುಬಂಧ – ಎ**

**ತಾವರಗೇರ**

**ಅನುಬಂಧ – ಬಿ**

ತಾವರಗೇರಾ ಗ್ರಾಮವು **ಪೂರ್ವ ದಿಕ್ಕಿಗೆ** ಸಿಂದನೂರ ರಸ್ತೆಯಲ್ಲಿ ಸರ್ವೆ ನಂಬರ 50, 51, ಮತ್ತು 99 ಇಲ್ಲಿಯವರಗೆ ವಿಸ್ತರಿಸಿದೆ. **ಪಶ್ಚಿಮ ದಿಕ್ಕಿಗೆ** ಕುಷ್ಟಗಿ ರಸ್ತೆಯ ಕಡೆ ಸರ್ವೆ ನಂಬರ 263 ಮತ್ತು 264 ವರಗೆ ವಿಸ್ತರಿಸಿದೆ. **ದಕ್ಷಿಣ ದಿಕ್ಕಿಗೆ** ಸರ್ವೆ ನಂಬರ 238 ಮತ್ತು ಉತ್ತರ ದಿಕ್ಕಿಗೆ ಸರ್ವೆ ನಂಬರ 523, 524 ಮತ್ತು 525 ರವರಗೆ ವಿಸ್ತರಿಸಿದೆ. **ಈಶಾನ್ಯ ದಿಕ್ಕಿಗೆ** ಸರ್ವೆ ನಂಬರ 01, 02

ಮತ್ತು 03 ವಿಸ್ತರಿಸಿದೆ. **ಉತ್ತರ ದಿಕ್ಕಿನಲ್ಲಿ** ಸರ್ವೆ ನಂಬರ 523 ರಿಂದ ಪೂರ್ವ ದಿಕ್ಕಿಗೆ ಸರ್ವೆ ನಂಬರ 99 ರವರಗೆ ಇದರ ಸರಹದ್ದು ಇರುತ್ತದೆ.

**ಆಗ್ನೇಯ** ಭಾಗದಲ್ಲಿ ತಾವರಗೇರಾ ಸರಹದ್ದು ಸರ್ವೆ ನಂಬರ 52, 220, 220/1 ರವರಗೆ ವಿಸ್ತರಿಸಿದೆ. ಅದೇ ರಿತಿ **ನೈರುತ್ಯಾ** ಭಾಗದಲ್ಲಿ ತಾವರಗೇರಾ ಸರಹದ್ದು ಸರ್ವೆ ನಂಬರ 227, 228, 536 ವರಗೆ ವಿಸ್ತರಿಸಿದೆ ಮತ್ತು **ವಾಯುವ್ಯ** ಭಾಗದಲ್ಲಿ ತಾವರಗೇರಾ ಸರಹದ್ದು 423, 424, 426, 428 ಸರ್ವೆ ನಂಬರಗಳ ವರಗೆ ವಿಸ್ತರಿಸಿದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**URBAN DEVELOPMENT SECRETARIAT**
**NOTIFICATION**
**No. UDD 16 MLR 2015, Bengaluru, Dated: 30-04-2015**

In exercise of the power conferred under Section 349 read with section 9 and 355-B of the Karnataka Municipalities Act 1964, the 'Panchayat Area' of Tavaragera, Koppal District, mentioned in Schedule "A" along with boundaries mentioned in Schedule "B" hereby declared as the "Transitional Area" of Tavaragera and further specify such Transitional area to be the "Town Panchayat Area" of Tavaragera with effect from the date of publishing this Notification in the Official Gazette by the Governor of Karnataka having regard to:

i. The population of such area is not less than ten thousand and not more than Twenty thousand;
ii. The density of population in such area is not less than four hundred inhabitants to one square kilometer of area;
iii. The percentage of employment in non-agricultural activities is not less than fifty per cent of the total employment;

In exercise of the power conferred under Section 351 of the Karnataka Municipalities Act, Town Panchayat is constituted for the said "Transitional area" of Tavaragera.

The notification is hereby published for the information to public. All the persons, who would like to file any objections/suggestions to this notification are hereby required to submit the same with reasons therefore in writing to the Director, Directorate of Municipal Administration, 9th floor, V.V.Tower, Bangalore within 30 days from publication of this notification in the official gazette. Further notification will be taken for final consideration after the said 30 days.

By Order and in the name of the Governor of Karnataka

**SIDDIQ PASHA**
Under Secretary to Government
Urban Development Department

**SCHEDULE-A**
**Tavaragera**

**SCHEDULE – B**

Tavaragera Village Grama Thana to the East side village boundary Survey No 50, 51 and 99 crossed road to the Sindanur. Go to the West towards Kushtagi road side village boundary Survey No 263 And 264. Towards South side village boundary Survey No 238 and North side village boundary Survey No 523, 524 and 525. Go to the North – east side village boundary Survey No 01, 02 and 03 in the North – east corner of the Survey No. 01, 02 and 03 Sized Land Indulgent turns North through the eastern boundary. Go to the North – west on side village boundary comes, the Survey No 423, 424, 426, 428 And 429. To the South – East Village Boundary Survey No. 52, 220, 220/1. Towards the South – West Village Boundary Survey No. 227, 536 and 228.

**SIDDIQ PASHA**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿಅ) (100 ಪ್ರತಿಗಳು)

. fdRNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ- III | ಬೆಂಗಳೂರು, ಗುರುವಾರ, ಏಪ್ರಿಲ್ ೩೦, ೨೦೧೫ (ವೈಶಾಖ ೧೦, ಶಕ ವರ್ಷ ೧೯೩೭) | ನಂ. ೪೨೨ |
|---|---|---|
| Part- III | Bengaluru, Thursday, April 30, 2015 (Vaishakha 10, Shaka Varsha 1937) | No. 422 |

ನಗರಾಭಿವೃದ್ಧಿ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ನಅಇ 42 ಎಂಎಲ್‌ಆರ್ 2015, ಬೆಂಗಳೂರು, ದಿನಾಂಕ: 30–04–2015**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3 ನೇ ಪ್ರಕರಣದೊಂದಿಗೆ ಓದಿಕೊಂಡ 9 ನೇ ಮತ್ತು 357 ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ ಅಂದರೆ:–

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಕಡಿಮೆ ಇಲ್ಲದ;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐದುನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ–ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಅನುಸೂಚಿ–ಎ ರಲ್ಲಿನ ಯಾದಗಿರಿ ಜಿಲ್ಲೆಯ ಕಕ್ಕೇರ 'ಗ್ರಾಮ ಪಂಚಾಯತಿ ಪ್ರದೇಶ' ವನ್ನು ಈ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಕಕ್ಕೇರ 'ಸಣ್ಣ ನಗರ ಪ್ರದೇಶ' ವೆಂದು ಉದ್ಘೋಷಿಸಿ ಸದರಿ ಸಣ್ಣ ನಗರ ಪ್ರದೇಶವನ್ನು 'ಕಕ್ಕೇರ ಪುರಸಭೆ' ಯ ಪ್ರದೇಶವೆಂದು ಸಹ ಪದನಾಮೀಕರಿಸಿರುತ್ತಾರೆ. ಸದರಿ ಸಣ್ಣ ನಗರ ಪ್ರದೇಶಕ್ಕೆ "ಪುರಸಭೆ"ಯನ್ನು ಸ್ಥಾಪಿಸಲಾಗಿದೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, 9ನೇ ಮಹಡಿ, ವಿ.ವಿ.ಗೋಪುರ, ಯಾದಗಿರಿ ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ನಿಗದಿತ ಸಮಯದಲ್ಲಿ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅನುಸೂಚಿ–ಎ**

ಕಕ್ಕೇರ, ಮಂಜಲಾಪುರ, ಜಮಾಲನಗರ

**ಅನುಸೂಚಿ–ಬಿ**

ಕಕ್ಕೇರಾ ಪಟ್ಟಣದ ವಿಸ್ತರಿಸಿದ ಹದ್ದಿನ ಪಿ ಬಿಂದುವಿನಿಂದ ಪೂರ್ವ ಭಾಗದ ಸರ್ವೆ ನಂ.230, 231, 371, 368, 367,365,363, 355, 356, 352, 347, 346, 341, 340, 336, 337 ಹುಣಸಿಹೊಳೆ ಸೀಮೇವರೆಗೆ ಇರುತ್ತದೆ. ಮುಂದುವರೆದು ಈಶ್ಯಾನಕ್ಕೆ ಸರ್ವೆ ನಂ:230, 234, 248, 247, 246, 258, 259, 252, 293, 292, ಚನ್ನಪಟ್ಟಣ ಸೀಮೆವರೆಗೆ ಇರುತ್ತದೆ.

ಪಿ.ಬಿಂದುವಿನಿಂದ ಕಕ್ಕೇರಾ ಪಟ್ಟಣದ ಉತ್ತರಕ್ಕೆ ಸರ್ವೆ ನಂ:723, 4, 223, 222, 89, 217, 210, 206, 176, 177, 178, 179, 180, 152, 148, 140 ಸಿದ್ದಾಪುರ ಸೀಮಾಂತರವರೆಗೆ ಇರುತ್ತದೆ.

ಪಿ.ಬಿಂದುವಿನಿಂದ ಕಕ್ಕೇರಾ ಪಟ್ಟಣದ ಪಶ್ಚಿಮಕ್ಕೆ ಸರ್ವೆ ನಂ:765, 764, 763, 762, 775, 778, 757, 729, 730, 731, 723, 713, 714 ಹನುಮಾಳನ ಸೀಮೆವರೆಗೆ ಹರಡಿದ್ದು ಮುಂದುವರೆದು **ನೈಋತ್ಯಕ್ಕೆ** ಸರ್ವೆ ನಂ:764, 555, 575, 576, 658, 655, 708, 704, 706, 688, 683, 682, 673, 674, 675 ರವರೆಗೆ ಹರಡಿರುತ್ತದೆ.

ಪಿ.ಬಿಂದುವಿನಿಂದ ಕಕ್ಕೇರಾ ಪಟ್ಟಣದ ದಕ್ಷಿಣ ಭಾಗದ ಸರ್ವೆ ನಂ:256, 254, 252, 413, 555, 559, 570, 566, 586, 587, 595, 594, 640, 618, 619, 621 ರವರೆಗೆ ಇದ್ದು ಕೃಷ್ಣ ನದೀವರೆಗೆ ಹರಡಿದ್ದು, ಸರ್ವೆ ನಂ:622, 624 ಮುಂದುವರೆದ್ದು ಕೃಷ್ಣ ನದೀಯವರೆಗೆ ಮುಂದುವರೆದಿರುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**URBAN DEVELOPMENT SECRETARIAT**
**NOTIFICATION**
**No. UDD 42 MLR 2015, Bengaluru, Dated: 30-04-2015**

In exercise of the powers conferred by the Section 3 read with Section 9 and 357 of the Karnataka Municipalities Act, 1964, the 'Panchayat Area' of Kakkera along with Manjalapur and Jamalnagar of Yadgir District, mentioned in the Schedule "A" along with boundaries mentioned in Scheduled "B" hereby declared as the "Smaller Urban Area" of Kakkera and further specify such area to be the "Town Municipal Area" of Kakkera with effect from the date of publishing this Notification in the Official Gazette by the Governor of Karnataka having regard to:

i. The population of such area is not less than twenty thousand and not more than three lakhs;
ii. The density of population in such area is not less than one thousand five hundred inhabitants to one square kilometer of area;
iii. The revenue generated for local administration from such area from tax and non-tax sources in the year of the last preceding census is not less than rupees nine lakhs per annum or a sum calculated at the rate of rupees forty five per capita per annum, whichever is higher;
iv. The percentage of employment in non-agricultural activities is not less than fifty per cent of the total employment;

The "Town Municipal Council" is constituted for the said "Smaller Urban Area" of Kakkera.

The notification is hereby published for the information of the Public. All the persons, who would like to file any objections/suggestions to this Notification are hereby required to submit the same with reasons therefore in writing to the Director, Directorate of Municipal Administration, 9th Floor, V.V.Tower, Yadgir within 30 days from publication of this Notification in the Official Gazette. Further, Notification will be taken for final consideration after the said 30 days.

By Order and in the name of the Governor of Karnataka

**SIDDIQ PASHA**
Under Secretary to Government
Urban Development Department

**SCHEDULE – A**

Kakkera, Manjalapura and Jamalnagara

**SCHEDULE – B**

The expanded P point of Kakkera town on Eastern side is Sy. No. 230, 231, 371, 368, 367, 365, 363, 355, 356, 352, 347, 346, 341, 340, 336, 337 upto the boundary of Hunsihole village. Further, at Northeast Sy. No. 230, 234, 248, 247, 246, 258, 259, 252, 293, 292 upto the boundary of Channapattan.

From P point of Kakkera town's North Sy. Nos. 723, 4, 223, 222, 89, 217, 210, 206, 176, 177, 178, 179, 180, 152, 148, 140 upto the boundary of Siddapur.

From P point of Kakkera town's West Sy. Nos. 765, 764, 763, 762, 775, 778, 757, 729, 730, 731, 723, 713, 714 spreaded upto the boundary of Hanumanal. Further, towards Southwest upto Sy. Nos. 764, 555, 575, 576, 658, 655, 702, 704, 706, 688, 683, 682, 673, 674, 675.

From P point of Kakkera town's South Sy. Nos. 256, 254, 252, 413, 555, 559, 570, 566, 586, 587, 595, 594, 640, 618, 619, 621 spreaded upto Krishna river's Sy. Nos. 622, 624. Further, upto Krishna River.

**SIDDIQ PASHA**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೩) (೧೦೦ ಪ್ರತಿಗಳು)

. fdRNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ– III | ಬೆಂಗಳೂರು, ಗುರುವಾರ, ಏಪ್ರಿಲ್ ೩೦, ೨೦೧೫ (ವೈಶಾಖ ೧೦, ಶಕ ವರ್ಷ ೧೯೩೭) | ನಂ. ೪೨೬ |
|---|---|---|
| Part– III | Bengaluru, Thursday, April 30, 2015 (Vaishakha 10, Shaka Varsha 1937) | No. 426 |



ನಗರಾಭಿವೃದ್ಧಿ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ನಅಇ 68 ಎಂಎಲ್ಆರ್ 2015, ಬೆಂಗಳೂರು, ದಿನಾಂಕ: 30–04–2015**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 349ನೇ ಪ್ರಕರಣದೊಂದಿಗೆ ಓದಿಕೊಂಡ 9 ಮತ್ತು 355–ಬಿ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ ಅಂದರೆ:–

1. ಅಂಥ ಪ್ರದೇಶದ ಜನಸಂಖ್ಯೆ ಹತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಇಪ್ಪತ್ತು ಸಾವಿರಕ್ಕಿಂತ ಹೆಚ್ಚಿಲ್ಲದ;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ನಾಲ್ಕು ನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಅನುಸೂಚಿ ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಅನುಸೂಚಿ–ಎ ರಲ್ಲಿನ ಬೆಳಗಾವಿ ಜಿಲ್ಲೆಯಲ್ಲಿನ ಕಲ್ಲೋಳಿ 'ಪಂಚಾಯತಿ' ಯನ್ನೊಳಗೊಂಡ ಪ್ರದೇಶವನ್ನು ಈ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನದಿಂದ ಜಾರಿಗೆ ಬರುವಂತೆ ಕಲ್ಲೋಳಿ 'ಪರಿವರ್ತನಾ ಪ್ರದೇಶ' ಎಂದು ಉದ್ಘೋಷಿಸಿ, ಸದರಿ ಪರಿವರ್ತನಾ ಪ್ರದೇಶವನ್ನು 'ಕಲ್ಲೋಳಿ ಪಟ್ಟಣ ಪಂಚಾಯಿತಿ' ಪ್ರದೇಶವೆಂದು ಸಹ ಪದನಾಮೀಕರಿಸಿರುತ್ತಾರೆ.

ಈ ಅಧಿಸೂಚನೆಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ. ಈ ಅಧಿಸೂಚನೆಯ ಬಗ್ಗೆ ಯಾವುದೇ ಆಕ್ಷೇಪಣೆಗಳನ್ನು/ಸಲಹೆಗಳನ್ನು ಸಲ್ಲಿಸಲು ಇಚ್ಛಿಸುವ ಎಲ್ಲಾ ವ್ಯಕ್ತಿಗಳು ಅದನ್ನು ಲಿಖಿತದಲ್ಲಿ ಕಾರಣ ಸಹಿತವಾಗಿ ಸದರಿ ಅಧಿಸೂಚನೆಯನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, 9ನೇ ಮಹಡಿ, ವಿ.ವಿ.ಗೋಪುರ, ಬೆಂಗಳೂರು. ಇವರಿಗೆ ಸಲ್ಲಿಸಬೇಕೆಂದು ಹಾಗೂ ಅಧಿಸೂಚನೆಯನ್ನು ಸದರಿ ಅವಧಿಯ ತರುವಾಯ ನಿಗದಿತ ಸಮಯದಲ್ಲಿ ಪರಿಶೀಲನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**<u>ಅನುಸೂಚಿ "ಎ"</u>**

**<u>ಕಲ್ಲೋಳಿ</u>**

**<u>ಅನುಸೂಚಿ"ಬಿ'</u>**

**ಪೂರ್ವಕ್ಕೆ :** ಹುಣಶ್ಯಾಳ ಪಿಜಿ ಗ್ರಾಮದ ಸರಹದ್ದು ಬರುತ್ತದೆ ಮತ್ತು ಅಥಣಿ ಮುಖ್ಯರಸ್ತೆ ಹಾದು ಹೋಗಿದೆ. ಉತ್ತರ ದಕ್ಷಿಣ ರಿ.ಸ. ನಂ.ಗಳು 160, 161, 162, 163, 164, 165, 166, 167, 168, 169, 290, 291, 292, 293, 294 ಗಡಿ ಕೊನೆಗೊಳ್ಳುತ್ತದೆ.

**ಪಶ್ಚಿಮಕ್ಕೆ:** ತುಕ್ಕಾನಟ್ಟಿ ಗ್ರಾಮ ಪಂಚಾಯತಿ ಸರಹದ್ದು ಬರುತ್ತದೆ. ರಿ.ಸ.ನಂ. ಗಳು 56, 57, 58, 59, 60, 61, 87, 88, 89, 90, 91, 92, 93, 94, 95, 115, 116, 130, 131, 132, 142, 144, 145, 147, 148, 149, 150 ,152, 153 ಗಡಿ ಕೊನೆಗೊಳ್ಳುತ್ತದೆ.

**ಉತ್ತರ ದಿಕ್ಕಿಗೆ :** ನಾಗನೂರ ಸರಹದ್ದು ಬರುತ್ತದೆ. ಪೂರ್ವ ಪಶ್ಚಿಮ ರಿ.ಸ. ನಂ. ಗಳು 17,19,20, 21, 32, 36, 38, 40, 41,48, 54, 55, ಗಡಿ ಕೊನೆಗೊಳ್ಳುತ್ತದೆ.

**ದಕ್ಷಿಣ ದಿಕ್ಕಿಗೆ:** ಸಂಗನಕೇರಿಯ ರಿ.ಸ. ನಂ. ಗಳು ಬರುತ್ತವೆ. ಪೂರ್ವ ಪಶ್ಚಿಮ ರಿ.ಸ. ನಂ. ಗಳು 154, 155, 156, 157, 158, 159 ಗಡಿ ಕೊನೆಗೊಳ್ಳುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**URBAN DEVELOPMENT SECRETARIAT**
**NOTIFICATION**
**No. UDD 68 MLR 2015, Bengaluru, Dated: 30-04-2015**

In exercise of the power conferred under Section 349 read with section 9 and 355-B of the Karnataka Municipalities Act 1964, the 'Panchayat Area' of Kallolli, Belagavi District, mentioned in Schedule "A" along with boundaries mentioned in Schedule "B" hereby declared as the "Transitional Area" of Kallolli and further specify such Transitional area to be the "Town Panchayat Area" of Kallolli with effect from the date of publishing this Notification in the Official Gazette by the Governor of Karnataka having regard to:

i. The population of such area is not less than ten thousand and not more than Twenty thousand;
ii. The density of population in such area is not less than four hundred inhabitants to one square kilometer of area;
iii. The percentage of employment in non-agricultural activities is not less than fifty per cent of the total employment;

In exercise of the power conferred under Section 351 of the Karnataka Municipalities Act, Town Panchayat is constituted for the said "Transitional area" of Kallolli.

The notification is hereby published for the information to public. All the persons, who would like to file any objections/suggestions to this notification are hereby required to submit the same with reasons therefore in writing to the Director, Directorate of Municipal Administration, 9th floor, V.V.Tower, Bangalore within 30 days from publication of this notification in the official gazette. Further notification will be taken for final consideration after the said 30 days.

By Order and in the name of the Governor of Karnataka

**SIDDIQ PASHA**
Under Secretary to Government
Urban Development Department

**Schedule -A**
**KALLOLLI**
**Schedule -B**

**East Side:** Hunashayalpg village boundary Athani Main Road passes, R.S. No:s160, 161, 162, 163, 164, 165, 166, 167, 168, 169, 290, 291, 292, 293, 294 boundary ended.
**West side:** Tukkanatti Gp Village boundary R.S. No: s56, 57, 58, 59, 60, 61, 87, 88, 89, 90, 91, 92, 93, 94, 95, 115, 116, 130, 131, 132, 142, 144, 145, 147, 148, 149, 150 ,152, 153, boundary ended.
**North Side:** Naganur road R.S. No:17,19,20, 21, 32, 36, 38, 40, 41, 48, 54, 55, boundary ended.
**South Side:** Sanganakeri Road R.S. No.s 154, 155, 156, 157, 158, 159, boundary ended.

**SIDDIQ PASHA**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೮) (೧೦೦ ಪ್ರತಿಗಳು)

. fdRNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ– **IV-A** | ಬೆಂಗಳೂರು, ಸೋಮವಾರ, ಏಪ್ರಿಲ್ ೨೦, ೨೦೧೫ (ಚೈತ್ರ ೩೦, ಶಕ ವರ್ಷ ೧೯೩೭) | ನಂ. ೩೪೫ |
| **Part– IV-A** | **Bengaluru, Monday, April 20, 2015 (Chaithra 30, Shaka Varsha 1937)** | **No. 345** |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/20/LA Bill/2015, Bengaluru, Dated: 20-4-2015**

The following Bill was introduced in Legislative Assembly on 20-4-2015

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಏಳನೇ ಅಧಿವೇಶನ**

**ಕರ್ನಾಟಕ ನಗರಪಾಲಿಕೆಗಳ (ತಿದ್ದುಪಡಿ) ವಿಧೇಯಕ, 2015**

**(2015ರ ವಿಧಾನಸಭೆಯ ವಿಧೇಯಕ ಸಂಖ್ಯೆ – 20)**

ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976ನ್ನು (1977ರ ಕರ್ನಾಟಕ ಅಧಿನಿಯಮ 14) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ನಗರಪಾಲಿಕೆಗಳ (ತಿದ್ದುಪಡಿ) ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ 14) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 3ನೇ ಪ್ರಕರಣದಲ್ಲಿ (2)ನೇ ಉಪಪ್ರಕರಣದ ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

**3. 4ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 4ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**4ಎ. ದೊಡ್ಡನಗರ ಪ್ರದೇಶವಾದ ಬೆಂಗಳೂರು ಮಹಾನಗರಪಾಲಿಕೆಯ ಪುನಾರಚನೆ.–** (1) ಈ ಅಧಿನಿಯಮದಲ್ಲಿ ಅಥವಾ ಯಾವುದೇ ನ್ಯಾಯಾಲಯದ ಅಥವಾ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶದಲ್ಲಿ ಏನೇ ಒಳಗೊಂಡಿದ್ದರೂ, 3 ಮತ್ತು 4ನೇ ಪ್ರಕರಣದ ಅಡಿಯಲ್ಲಿ ರಚನೆಯಾದ ದೊಡ್ಡನಗರ ಪ್ರದೇಶವಾದ ಬೆಂಗಳೂರು ಮಹಾನಗರಪಾಲಿಕೆಯ (ಇಲ್ಲಿ ಇನ್ನುಮುಂದೆ ಬೆಂಗಳೂರು ಮಹಾನಗರಪಾಲಿಕೆ ಎಂದು ಉಲ್ಲೇಖಿಸಲಾಗಿದೆ) ಪುನಾರಚನೆಯ ಉದ್ದೇಶಕ್ಕಾಗಿ, ತಕ್ಷಣದಿಂದಲೇ ಜಾರಿಗೆ ಬರುವಂತೆ ಅದರ ಅಸ್ತಿತ್ವವನ್ನು ಸಮಾಪನಗೊಳಿಸತಕ್ಕದ್ದು.

(2) ಸಮಾಪನದ ದಿನಾಂಕದಿಂದ ದೊಡ್ಡನಗರ ಪ್ರದೇಶವಾದ ಬೆಂಗಳೂರು ಮಹಾನಗರಪಾಲಿಕೆಯಲ್ಲಿ ನಿಹಿತವಾಗಿದ್ದ ಎಲ್ಲಾ ಸ್ವತ್ತುಗಳು ಮತ್ತು ಹೊಣೆಗಾರಿಕೆಗಳು ಅದು ಪುನಾರಚನೆಯಾಗುವವರೆಗೆ ರಾಜ್ಯ ಸರ್ಕಾರದಲ್ಲಿ ನಿಹಿತವಾಗಿರತಕ್ಕದ್ದು.

(3) 3ನೇ ಪ್ರಕರಣದ ಉಪಬಂಧಗಳನ್ನು ಗಮನದಲ್ಲಿಟ್ಟುಕೊಂಡು, ರಾಜ್ಯಪಾಲರು, ಪೂರ್ವ ಪ್ರಕಟಣೆಯ ತರುವಾಯ, ಅಧಿಸೂಚನೆಯ ಮೂಲಕ ಹಿಂದಿನ ದೊಡ್ಡನಗರ ಪ್ರದೇಶವಾದ ಬೆಂಗಳೂರು ಮಹಾನಗರಪಾಲಿಕೆಯ ಅಂತಹ ಪ್ರದೇಶಗಳನ್ನು ಒಳಗೊಂಡಿರುವ, ರಾಜ್ಯ ಸರ್ಕಾರವು ಮಾಡಿದ ಶಿಫಾರಸ್ಸಿನಷ್ಟು ಸಂಖ್ಯೆಯ ಹೊಸ ನಗರ ಪಾಲಿಕೆಗಳನ್ನು ರಚಿಸತಕ್ಕದ್ದು.

(4) (3)ನೇ ಉಪಪ್ರಕರಣದ ಅಡಿಯಲ್ಲಿ ಹಾಗೆ ಹೊರಡಿಸಲಾದ ಅಧಿಸೂಚನೆಯ ಕರಡನ್ನು, ಅದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಗೆ ಅವರ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು, ಯಾವುದಾದರೂ ಇದ್ದಲ್ಲಿ, ಮೂವತ್ತು ದಿನಗಳ ಅವಧಿಯೊಳಗಾಗಿ ಸಲ್ಲಿಸಲು ಅವಕಾಶ ನೀಡಿ, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು.

(5) (3)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಿದ ಕರಡು ಅಧಿಸೂಚನೆಯ ಮೇರೆಗೆ ಸ್ವೀಕರಿಸಿದ ಆಕ್ಷೇಪಣೆಗಳು ಮತ್ತು ಸಲಹೆಗಳು, ಏನಾದರೂ ಇದ್ದಲ್ಲಿ, ಅವುಗಳನ್ನು ಪರಿಶೀಲಿಸಿದ ನಂತರ, ರಾಜ್ಯಪಾಲರು, ಅಂತಹ ಮಾರ್ಪಾಡಿನೊಂದಿಗೆ, ಯಾವುದಾದರೂ ಇದ್ದಲ್ಲಿ, ರಾಜ್ಯ ಸರ್ಕಾರವು ಮಾಡಿದ ಶಿಫಾರಸ್ಸಿನಷ್ಟು ಸಂಖ್ಯೆಯ ಹೊಸ ನಗರಪಾಲಿಕೆಗಳನ್ನು, ಅವುಗಳು ಒಳಗೊಳ್ಳುವ ಪ್ರದೇಶಗಳು ಮತ್ತು ಗಡಿಗಳನ್ನು ನಿರ್ದಿಷ್ಟಪಡಿಸಿ, ಅಂತಿಮ ಅಧಿಸೂಚನೆಯನ್ನು ಹೊರಡಿಸತಕ್ಕದ್ದು:

ಪರಂತು, ಸಮಾಪನದ ದಿನಾಂಕದ ನಿಕಟಪೂರ್ವದಲ್ಲಿ ಅನ್ವಯಿಸುವಂತೆ ಜಾರಿಯಲ್ಲಿದ್ದ ದೊಡ್ಡನಗರ ಪ್ರದೇಶವಾದ ಬೆಂಗಳೂರು ಮಹಾನಗರಪಾಲಿಕೆಗೆ ಸಂಬಂಧಿಸಿದಂತೆ, ಸದರಿ ಕಾನೂನುಗಳ ಅಡಿಯಲ್ಲಿ ಮಾಡಲಾದ ಅಥವಾ ಹೊರಡಿಸಲಾದ ಅಥವಾ ವಿಧಿಸಲಾದ ಯಾವುದೇ ನೇಮಕಾತಿ, ಅಧಿಸೂಚನೆ, ಸೂಚನೆ, ತೆರಿಗೆ, ಆದೇಶ, ಯೋಜನೆ, ಪರವಾನಿಗೆ (ಲೈಸೆನ್ಸ್), ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಯು ಜಾರಿಯಲ್ಲಿರುವುದು ಮುಂದುವರೆಯತಕ್ಕದ್ದು ಮತ್ತು ಈ ಅಧಿನಿಯಮದ ಅಡಿಯಲ್ಲಿ ಮಾಡಲಾದ ಅಥವಾ ಹೊರಡಿಸಲಾದ ಅಥವಾ ವಿಧಿಸಲಾದ ಯಾವುದೇ ನೇಮಕಾತಿ, ಅಧಿಸೂಚನೆ, ಸೂಚನೆ, ತೆರಿಗೆ, ಆದೇಶ, ಯೋಜನೆ, ಪರವಾನಿಗೆ (ಲೈಸೆನ್ಸ್), ಅನುಮತಿ, ನಿಯಮ, ಉಪವಿಧಿ ಅಥವಾ ನಮೂನೆಯ ಮೂಲಕ ರದ್ದುಗೊಳಿಸಿದ ಹೊರತಾಗಿ ಮತ್ತು ರದ್ದುಗೊಳಿಸುವವರೆಗೆ ಈ ಅಧಿನಿಯಮದ ಉಪಬಂಧಗಳಡಿಯಲ್ಲಿ ಮಾಡಲಾಗಿದೆ, ಹೊರಡಿಸಲಾಗಿದೆ ಅಥವಾ ವಿಧಿಸಲಾಗಿದೆ ಎಂದು ಭಾವಿಸತಕ್ಕದ್ದು.

(6) ಸದರಿ ದೊಡ್ಡನಗರ ಪ್ರದೇಶವಾದ ಬೆಂಗಳೂರು ಮಹಾನಗರಪಾಲಿಕೆಯ ಸದರಿ ನಗರಪಾಲಿಕೆಗೆ ಸೇರಿದ (ದರಗಳು, ತೆರಿಗೆಗಳು ಮತ್ತು ಫೀಜುಗಳ ಬಾಕಿಯನ್ನೊಳಗೊಂಡಂತೆ) ಖರ್ಚಾಗದೆ ಬಾಕಿ ಉಳಿದ ನಿಧಿಗಳನ್ನು ಮತ್ತು ಅಂತಹ ಸಮಾಪನದ ಮೊದಲಿನ ಎಲ್ಲಾ ಸ್ವತ್ತುಗಳು, ಹಕ್ಕುಗಳು, ಹೊಣೆಗಾರಿಕೆಗಳು ಮತ್ತು ಅಧಿಕಾರಗಳು ಸರ್ಕಾರದಲ್ಲಿ ನಿಹಿತವಾಗಿರತಕ್ಕದ್ದು ಮತ್ತು ಸರ್ಕಾರವು ಹೊಸ ದೊಡ್ಡ ನಗರ ಪ್ರದೇಶಗಳ ಅಥವಾ ನಗರ ಪಾಲಿಕೆಗಳ ನಡುವೆ ಹಂಚಬೇಕಾದ ಬೆಂಗಳೂರು ಮಹಾನಗರಪಾಲಿಕೆಯ ಆಸ್ತಿ ಮತ್ತು ಹೊಣೆಗಾರಿಕೆ ಮುಂತಾದವುಗಳ ಭಾಗಗಳನ್ನು ಅವುಗಳಿಗೆ ಪರಿಣಾಮವನ್ನು ಬೀರುವ ಎಲ್ಲಾ ಚಾರ್ಜುಗಳು ಮತ್ತು ಹೊಣೆಗಾರಿಕೆಗಳಿಗೆ ಒಳಪಟ್ಟು, ನಿರ್ಧರಿಸತಕ್ಕದ್ದು, ಹಾಗೂ ಹೊಸ ನಗರಪಾಲಿಕೆಯಲ್ಲಿ ಅಥವಾ ದೊಡ್ಡ ನಗರ ಪ್ರದೇಶದಲ್ಲಿ (ಇಲ್ಲಿ ಇನ್ನುಮುಂದೆ ನಗರಪಾಲಿಕೆ ಎಂದು ಉಲ್ಲೇಖಿಸಲಾಗಿದೆ) ನಿಹಿತವಾಗಿರತಕ್ಕದ್ದು.

(7) ಸದರಿ ದೊಡ್ಡನಗರ ಪ್ರದೇಶವಾದ ಬೆಂಗಳೂರು ಮಹಾನಗರಪಾಲಿಕೆಗೆ ಸಂಬಂಧಿಸಿದಂತೆ, ಸದರಿ ಸಮಾಪನೆಯ ದಿನಾಂಕದ ನಿಕಟಪೂರ್ವದಲ್ಲಿ ಯಾವುದೇ ಕಾನೂನು ಅಥವಾ ನಿಯಮದ ಅಡಿಯಲ್ಲಿ ಮಾಡಲಾದ ಅಥವಾ ಅಧಿಕೃತಗೊಳಿಸಲಾದ ಎಲ್ಲಾ ಆಯವ್ಯಯ ಅಂದಾಜುಗಳು, ಕರನಿರ್ಧರಣ ಪಟ್ಟಿಗಳು, ಮೌಲ್ಯಮಾಪನಗಳು ಅಥವಾ ಅಳತೆಗಳು ಈ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಅಧಿಕೃತಗೊಳಿಸಲಾಗಿದೆ ಎಂದು ಭಾವಿಸತಕ್ಕದ್ದು.

(8) ಸದರಿ ಸಮಾಪನದ ದಿನಾಂಕದ ನಿಕಟಪೂರ್ವದಲ್ಲಿ ಸದರಿ ದೊಡ್ಡನಗರ ಪ್ರದೇಶವಾದ ಬೆಂಗಳೂರು ಮಹಾನಗರಪಾಲಿಕೆಗೆ ವಹಿಸಲಾದ ಅಥವಾ ಅದರ ಪರವಾಗಿ ಮಾಡಲಾದ ಮತ್ತು ಸದರಿ ದಿನಾಂಕದಂದು ಅಸ್ತಿತ್ವದಲ್ಲಿರುವ ಎಲ್ಲಾ ಋಣಗಳು ಮತ್ತು ಬಾಧ್ಯತೆಗಳು ಹಾಗೂ ಅದರ ಪರವಾಗಿ ಮಾಡಲಾದ ಎಲ್ಲಾ ಗುತ್ತಿಗೆಗಳನ್ನು, ಈ ಅಧಿನಿಯಮದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಹೊಸ ನಗರಪಾಲಿಕೆಗೆ ವಹಿಸಲಾಗಿದೆ ಮತ್ತು ಮಾಡಲಾಗಿದೆ ಎಂದು ಭಾವಿಸತಕ್ಕದ್ದು.

(9) ಸದರಿ ಸಮಾಪನದ ದಿನಾಂಕದ ನಿಕಟಪೂರ್ವದಲ್ಲಿ ದೊಡ್ಡನಗರ ಪ್ರದೇಶವಾದ ಬೆಂಗಳೂರು ಮಹಾನಗರಪಾಲಿಕೆಯಲ್ಲಿ ಸೇವೆಯಲ್ಲಿರುವ ಎಲ್ಲಾ ಅಧಿಕಾರಿಗಳು ಮತ್ತು ನೌಕರರು ಈ ಅಧಿನಿಯಮದ ಅಡಿಯಲ್ಲಿ ಆಯ್ಕೆ ಮಾಡಿಕೊಂಡ ಹೊಸ ನಗರಪಾಲಿಕೆಯ ಅಧಿಕಾರಿಗಳು ಮತ್ತು ನೌಕರರಾಗತಕ್ಕದ್ದು ಮತ್ತು ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಬೇರೆ ಉಪಬಂಧವನ್ನು ಮಾಡುವವರೆಗೆ ಅಂಥ ದಿನಾಂಕದ ನಿಕಟಪೂರ್ವದಲ್ಲಿ ಅವರು ಅರ್ಹರಾಗಿದ್ದ ವೇತನಗಳನ್ನು ಮತ್ತು ಭತ್ಯೆಗಳನ್ನು ಸ್ವೀಕರಿಸತಕ್ಕದ್ದು ಮತ್ತು ಸೇವಾ ಷರತ್ತುಗಳಿಗೆ ಒಳಪಡತಕ್ಕದ್ದು.

(10) ಸದರಿ ದಿನಾಂಕದಂದು ದೊಡ್ಡ ನಗರ ಪ್ರದೇಶವಾದ ಬೆಂಗಳೂರು ಮಹಾನಗರ ಪಾಲಿಕೆಯ ಮುಂದೆ ಬಾಕಿಯಿರುವ ಎಲ್ಲಾ ವಿಚಾರಣೆಗಳು ಹೊಸ ನಗರ ಪಾಲಿಕೆಗೆ ವರ್ಗಾವಣೆಯಾಗಿವೆ ಎಂದು ಭಾವಿಸತಕ್ಕದ್ದು ಮತ್ತು ಮುಂದುವರಿಯತಕ್ಕದ್ದು.

(11) ಯಾವುದೇ ಪ್ರಾಧಿಕಾರದ ಮುಂದೆ ಬಾಕಿಯಿರುವ ಎಲ್ಲಾ ಅಪೀಲುಗಳನ್ನು ಕಾರ್ಯ ಸಾಧ್ಯವಾಗುವಷ್ಟರ ಮಟ್ಟಿಗೆ, ಅವುಗಳನ್ನು ಸಲ್ಲಿಸಿದಾಗ, ಹೊಸ ದೊಡ್ಡ ನಗರ ಪ್ರದೇಶದಲ್ಲಿ ಸದರಿ ಸ್ಥಳೀಯ ಪ್ರದೇಶವು ಸೇರಿದ್ದರೆ ಹೇಗೋ ಹಾಗೆ ವಿಲೇ ಮಾಡತಕ್ಕದ್ದು.

(12) ಸದರಿ ದಿನಾಂಕದಂದು ಬಾಕಿಯಿರುವ ದೊಡ್ಡನಗರ ಪ್ರದೇಶವಾದ ಬೆಂಗಳೂರು ಮಹಾನಗರ ಪಾಲಿಕೆಯ ಮೂಲಕ ಅಥವಾ ಅದರ ಪರವಾಗಿ ಪ್ರಾರಂಭಿಸಲಾದ ಎಲ್ಲಾ ಪ್ರಾಸಿಕ್ಯೂಷನ್‌ಗಳು, ದೊಡ್ಡ ನಗರ ಪ್ರದೇಶವಾದ ಬೆಂಗಳೂರು ಮಹಾನಗರ ಪಾಲಿಕೆಯ ಅಥವಾ ಅದರ ಯಾವುದೇ ಅಧಿಕಾರಿಯ ಮೂಲಕ ಅಥವಾ ವಿರುದ್ಧವಾಗಿ ಪ್ರಾರಂಭಿಸಲಾದ ಎಲ್ಲಾ ದಾವೆಗಳು ಅಥವಾ ಇತರ ಕಾನೂನು ವ್ಯವಹರಣೆಗಳು, ಅಂಥ ಪ್ರಾಸಿಕ್ಯೂಷನ್‌ಗಳು, ದಾವೆಗಳು ಅಥವಾ ವ್ಯವಹರಣೆಗಳನ್ನು ಪ್ರಾರಂಭಿಸಲಾದಾಗ ದೊಡ್ಡನಗರ ಪ್ರದೇಶದ ನಗರಪಾಲಿಕೆಯ ಪ್ರದೇಶವು ದೊಡ್ಡ ನಗರ ಪ್ರದೇಶದಲ್ಲಿ ಒಳಗೊಂಡಿದ್ದರೆ ಹೇಗೋ ಹಾಗೇ ಹೊಸ ನಗರಪಾಲಿಕೆಯ ಮೂಲಕ ಅಥವಾ ಅದರ ವಿರುದ್ಧ ಮುಂದುವರೆಯತಕ್ಕದ್ದು.

(13) ಸಮಾಪನದ ದಿನಾಂಕದಂದು, ದೊಡ್ಡನಗರ ಪ್ರದೇಶವಾದ ಬೆಂಗಳೂರು ಮಹಾನಗರಪಾಲಿಕೆಯ ಎಲ್ಲ ಕೌನ್ಸಿಲರುಗಳು, ಮೇಯರ್ ಮತ್ತು ಉಪಮೇಯರ್ ಇವರುಗಳು (20)ನೇ ಉಪಪ್ರಕರಣದ ಅಡಿಯಲ್ಲಿ ಚುನಾವಣೆಗೆ ಸ್ಪರ್ಧಿಸಲು

ತಮ್ಮ ಅರ್ಹತೆಗೆ ಬಾಧಕವಾಗದಂತೆ ಅಂಥ ಕೌನ್ಸಿಲರುಗಳಾಗಿ, ಮೇಯರ್ ಅಥವಾ ಉಪಮೇಯರ್ ಆಗಿ ಪದಧಾರಣ ಮಾಡಿರುವುದು ನಿಂತುಹೋಗತಕ್ಕದ್ದು.

(14) ಬೆಂಗಳೂರು ಮಹಾನಗರ ಪಾಲಿಕೆಯನ್ನು ಸಮಾಪನಗೊಳಿಸಿರುವ ಅವಧಿಯಲ್ಲಿ ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಮೇರೆಗೆ ನಗರಪಾಲಿಕೆಗೆ ಮತ್ತು ನಗರಪಾಲಿಕೆಯ ಸ್ಥಾಯೀ ಸಮಿತಿಗಳಿಗೆ ಪ್ರದತ್ತವಾದ ಎಲ್ಲ ಅಧಿಕಾರಗಳನ್ನು ಮತ್ತು ವಿಧಿಸಿದ ಎಲ್ಲ ಕರ್ತವ್ಯಗಳನ್ನು ಈ ಸಂಬಂಧದಲ್ಲಿ ಸರ್ಕಾರವು ನೇಮಕಮಾಡಿದ ಆಡಳಿತಾಧಿಕಾರಿಯು ಚಲಾಯಿಸತಕ್ಕದ್ದು ಮತ್ತು ನೆರವೇರಿಸತಕ್ಕದ್ದು.

(15) ಆಡಳಿತಾಧಿಕಾರಿಯು ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಎಂದು ಸರ್ಕಾರವು ನಿರ್ದೇಶಿಸಬಹುದು ಮತ್ತು ಅಂಥ ನಿರ್ದೇಶನವನ್ನು ನೀಡಿರುವಾಗ, ಸರ್ಕಾರವು ಆದೇಶದ ಮೂಲಕ, ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ಮಾಸಿಕ ಸಂಬಳ ಮತ್ತು ಭತ್ಯೆಗಳನ್ನು ನಗರಪಾಲಿಕೆಯ ನಿಧಿಗಳಿಂದ ಅವರಿಗೆ ಸಂದಾಯ ಮಾಡತಕ್ಕದ್ದು ಮತ್ತು ಸರ್ಕಾರದ ಅಧೀನದಲ್ಲಿನ ಸೇವಾ ಷರತ್ತುಗಳ ಮೂಲಕ ಅಗತ್ಯಪಡಿಸಬಹುದಾದಂತೆ ಅವರಿಂದ ಅಥವಾ ಸಂದರ್ಭಾನುಸಾರವಾಗಿ ಅವರಿಗೆ ಸಂದಾಯ ಮಾಡಬೇಕಾದ ಅಧಿಕಾರಿಯ ರಜೆ ಭತ್ಯೆಗಳು, ನಿವೃತ್ತಿ ವೇತನ ಮತ್ತು ಭವಿಷ್ಯನಿಧಿಗಳ ಬಾಬಿಗೆ ಅಂಥ ವಂತಿಗೆಯನ್ನು ನಗರಪಾಲಿಕೆಯು ನೀಡತಕ್ಕದ್ದು.

(16) ಬೆಂಗಳೂರು ಮಹಾನಗರ ಪಾಲಿಕೆಯನ್ನು ಸಮಾಪನಗೊಳಿಸಿರುವ ಅವಧಿಯಲ್ಲಿ ಯಾವುದೇ ಅಧಿನಿಯಮಿತಿಯಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನಲ್ಲಿ ನಗರಪಾಲಿಕೆಯ ಮೇಯರ್‌ಗೆ ಮಾಡಿರುವ ಉಲ್ಲೇಖಗಳನ್ನು (14)ನೇ ಉಪಪ್ರಕರಣದ ಅಡಿಯಲ್ಲಿ ನೇಮಕಗೊಂಡ ಆಡಳಿತಾಧಿಕಾರಿಗೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು.

(17) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಈ ಪ್ರಕರಣದ ಅಡಿಯಲ್ಲಿ ಆಡಳಿತಗಾರನು ನೇಮಕವಾದ ಮೇಲೆ, ಅಂಥ ನೇಮಕಾತಿಯ ಅವಧಿಯಲ್ಲಿ, ನಗರಪಾಲಿಕೆ, ನಗರಪಾಲಿಕೆಯ ಸ್ಥಾಯೀ ಸಮಿತಿಗಳು ಮತ್ತು ಮೇಯರ್, ಉಪಮೇಯರ್ ಮತ್ತು ಈ ಅಧಿನಿಯಮ ಅಥವಾ ಯಾವುದೇ ಇತರ ಕಾನೂನಿನ ಉಪಬಂಧಗಳನ್ನು ನೆರವೇರಿಸುವುದಕ್ಕಾಗಿ ಪ್ರಭಾರ ಹೊಂದಿರುವ, ಆಯುಕ್ತನನ್ನು ಹೊರತುಪಡಿಸಿ ಇತರ ಪ್ರಾಧಿಕಾರಗಳು, ಈ ಅಧಿನಿಯಮದ ಮೂಲಕ ಅಥವಾ ಯಾವುದೇ ಇತರ ಕಾನೂನಿನ ಅಡಿಯಲ್ಲಿ ಅಥವಾ ಅದರ ಮೂಲಕ ಅವರಿಗೆ ಪ್ರದತ್ತ ಮಾಡಲಾದ ಯಾವುವೇ ಅಧಿಕಾರಗಳನ್ನು ಚಲಾಯಿಸುವುದು ಮತ್ತು ವಿಧಿಸಲಾದ ಯಾವುದೇ ಕರ್ತವ್ಯಗಳು ಅಥವಾ ಪ್ರಕಾರ್ಯಗಳನ್ನು ನೆರವೇರಿಸುವುದು ಮತ್ತು ನಿರ್ವಹಿಸುವುದು ನಿಂತುಹೋಗತಕ್ಕದ್ದು ಮತ್ತು ಆಡಳಿತಗಾರನು ಎಲ್ಲಾ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಎಲ್ಲಾ ಅಂಥ ಕರ್ತವ್ಯಗಳನ್ನು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ನೆರವೇರಿಸತಕ್ಕದ್ದು.

(18) ಬೆಂಗಳೂರು ಮಹಾನಗರ ಪಾಲಿಕೆಯನ್ನು ಸಮಾಪನಗೊಳಿಸಿರುವ ಅವಧಿಯಲ್ಲಿ ಆಡಳಿತಾಧಿಕಾರಿಯು ತಮ್ಮ ಪ್ರಕಾರ್ಯಗಳನ್ನು ನಿರ್ವಹಿಸುವಾಗ ಸಾರ್ವಜನಿಕ ಹಿತಾಸಕ್ತಿಯನ್ನು ಒಳಗೊಂಡಿರುವ ಕಾರ್ಯನೀತಿಯ ವಿಷಯದಲ್ಲಿ ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ನಿರ್ದೇಶನಗಳಿಂದ ಮಾರ್ಗದರ್ಶನ ಪಡೆಯತಕ್ಕದ್ದು ಮತ್ತು ನಿರ್ದೇಶನವು ಸಾರ್ವಜನಿಕ ಹಿತಾಸಕ್ತಿಯನ್ನು ಒಳಗೊಂಡಿರುವ ಕಾರ್ಯನೀತಿಯ ವಿಷಯಕ್ಕೆ ಸಂಬಂಧಪಡುತ್ತದೆಯೇ ಎಂಬ ಯಾವುದೇ ಪ್ರಶ್ನೆಯು ಉದ್ಭವಿಸಿದರೆ, ಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು.

(19) ಸರ್ಕಾರವು ಅಧಿಸೂಚನೆಯ ಮೂಲಕ ಈ ಅಧಿನಿಯಮದ ಮೇರೆಗೆ ಕೌನ್ಸಿಲರುಗಳಾಗಲು ಅರ್ಹರಾಗಿರತಕ್ಕ ಹದಿನೈದಕ್ಕೆ ಕಡಿಮೆ ಇಲ್ಲದ ಮತ್ತು ಇಪ್ಪತ್ತೈದಕ್ಕೆ ಹೆಚ್ಚಿಲ್ಲದ ವ್ಯಕ್ತಿಗಳನ್ನೊಳಗೊಂಡ ಒಂದು ಸಲಹಾ ಸಮಿತಿಯನ್ನು ಆಡಳಿತಾಧಿಕಾರಿಗೆ ನೆರವಾಗಲು ನೇಮಕ ಮಾಡಬಹುದು.

(20) ಬೆಂಗಳೂರು ಮಹಾನಗರ ಪಾಲಿಕೆಯನ್ನು ಸಮಾಪನಗೊಳಿಸಿದಾಗ ಅಂಥ ಸಮಾಪನೆಯ ದಿನಾಂಕದಿಂದ ಆರು ತಿಂಗಳುಗಳು ಮುಕ್ತಾಯವಾಗುವುದಕ್ಕೆ ಮೊದಲು ಈ ಅಧಿನಿಯಮದ ಮೇರೆಗೆ ಉಪಬಂಧಿಸಿದ ರೀತಿಯಲ್ಲಿ ಅದನ್ನು ಪುನಾರಚಿಸತಕ್ಕದ್ದು:

ಪರಂತು, ಸಮಾಪನಗೊಂಡ ಬೆಂಗಳೂರು ಮಹಾನಗರ ಪಾಲಿಕೆಯು ಯಾವ ಅವಧಿಗೆ ಮುಂದುವರಿಯಬಹುದಾಗಿತ್ತೋ ಆ ಉಳಿದ ಅವಧಿಯು ಆರು ತಿಂಗಳುಗಳಿಗಿಂತ ಕಡಿಮೆಯಾಗಿದ್ದರೆ, ಅಂಥ ಅವಧಿಗೆ ನಗರಪಾಲಿಕೆಯನ್ನು ರಚಿಸುವುದಕ್ಕೆ ಈ ಪ್ರಕರಣದ ಮೇರೆಗೆ ಚುನಾವಣೆ ನಡೆಸುವ ಅಗತ್ಯವಿರತಕ್ಕದ್ದಲ್ಲ.

**4. 7ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 7ನೇ ಪ್ರಕರಣದ (1)ನೇ ಉಪಪ್ರಕರಣದ (ಬಿ) ಖಂಡದಲ್ಲಿ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಂದರ್ಭದಲ್ಲಿ ಕೌನ್ಸಿಲರುಗಳ ಒಟ್ಟು ಸಂಖ್ಯೆಯ ಶೇಕಡ ಹತ್ತಕ್ಕೆ ಮೀರದಷ್ಟು ಮತ್ತು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**5. 11ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ನೇ ಪ್ರಕರಣದಲ್ಲಿ,–

(ಎ) (1)ನೇ ಉಪಪ್ರಕರಣದಲ್ಲಿ, "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ಹೊರತುಪಡಿಸಿ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(ಬಿ) (1ಎ) ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

(ಸಿ) (2)ನೇ ಉಪಪ್ರಕರಣದಲ್ಲಿ (ಎ) ಮತ್ತು (ಬಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಏಳು ಕೌನ್ಸಿಲರುಗಳನ್ನು ಒಳಗೊಂಡಿರತಕ್ಕದ್ದು."

**6. 61ಎ ಪ್ರಕರಣವನ್ನು ಬಿಟ್ಟುಬಿಡುವುದು.–** ಮೂಲ ಅಧಿನಿಯಮದ 61ಎ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**7. 62ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 62ನೇ ಪ್ರಕರಣದಲ್ಲಿ,–

(i) ಶೀರ್ಷಿಕೆಯಲ್ಲಿ "ಇತರ" ಎಂಬ ಪದವನ್ನು ಬಿಟ್ಟುಬಿಡತಕ್ಕದ್ದು.

(ii) "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ಹೊರತುಪಡಿಸಿ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**8. 108ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 108ಎ ಪ್ರಕರಣದಲ್ಲಿ,–

(1) ಶೀರ್ಷಿಕೆಯನ್ನು ಈ ಮುಂದಿನಂತೆ ಪ್ರತಿಯೋಜಿಸತಕ್ಕದ್ದು, ಎಂದರೆ:–

"108ಎ. ಹಿಂದಿನ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಗಳ ಸಂಬಂಧದಲ್ಲಿ ಆಸ್ತಿ ತೆರಿಗೆಯನ್ನು ವಿಧಿಸುವುದು ಮತ್ತು ಲೆಕ್ಕ ಹಾಕುವುದು."

(2) (1)ನೇ ಉಪಪ್ರಕರಣದಲ್ಲಿ, "ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು" ಎಂಬ ಪದಗಳ ತರುವಾಯ "ಹಿಂದಿನ" ಎಂಬ ಪದವನ್ನು ಸೇರಿಸತಕ್ಕದ್ದು;

(3) (2) ನೇ ಉಪಪ್ರಕರಣದಲ್ಲಿ,–

(i) "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು" ಎಂಬ ಪದಗಳಿಗೆ "ನಗರ ಪಾಲಿಕೆಯು" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು;

(ii) ವಿವರಣೆಯಲ್ಲಿ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(iii) ಮೂರನೇ ಪರಂತುಕದಲ್ಲಿ, ಎರಡು ಕಡೆಯಲ್ಲಿ ಬರುವ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(4) (3)ನೇ ಉಪಪ್ರಕರಣದಲ್ಲಿ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು" ಎಂಬ ಪದಗಳಿಗೆ "ನಗರ ಪಾಲಿಕೆಯು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(5) (5)ನೇ ಉಪಪ್ರಕಣದಲ್ಲಿ,

(i) "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ" ಎಂಬ ಪದಗಳಿಗೆ "ಹಿಂದಿನ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಪ್ರದೇಶಗಳಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) ಪರಂತುಕದಲ್ಲಿ, "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು" ಎಂಬ ಪದಗಳಿಗೆ "ನಗರ ಪಾಲಿಕೆಯು" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

(6) (8)ನೇ ಉಪಪ್ರಕರಣದಲ್ಲಿ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**9. 152ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 152ನೇ ಪ್ರಕರಣದಲ್ಲಿ, "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು" ಎಂಬ ಪದಗಳಿಗೆ "ಹಿಂದಿನ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಗಳಲ್ಲಿನ ಹೊಸ ನಗರ ಪಾಲಿಕೆಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**10. 167ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 167ನೇ ಪ್ರಕರಣದ, (1)ನೇ ಉಪಪ್ರಕರಣದಲ್ಲಿ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ಹೊರತುಪಡಿಸಿ, ನಗರಪಾಲಿಕೆಗಳ ಸಂದರ್ಭದಲ್ಲಿ, ತೆರಿಗೆ, ಹಣಕಾಸು ಮತ್ತು ಅಪೀಲುಗಳ ಸ್ಥಾಯೀ ಸಮಿತಿಯು ಮತ್ತು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಂದರ್ಭದಲ್ಲಿ," ಎಂಬ ಪದಗಳನ್ನು ಮತ್ತು ಅಲ್ಪ ವಿರಾಮ ಚಿಹ್ನೆಗಳನ್ನು ಬಿಟ್ಟುಬಿಡತಕ್ಕದ್ದು.

**11. 171ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 171ನೇ ಪ್ರಕರಣದಲ್ಲಿ, "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ಹೊರತುಪಡಿಸಿ, ನಗರಪಾಲಿಕೆಗಳ ಸಂದರ್ಭದಲ್ಲಿ, ತೆರಿಗೆ, ಹಣಕಾಸು ಮತ್ತು ಅಪೀಲುಗಳ ಸ್ಥಾಯೀ ಸಮಿತಿಯು ಮತ್ತು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಂದರ್ಭದಲ್ಲಿ" ಎಂಬ ಪದಗಳನ್ನು ಮತ್ತು ಅಲ್ಪವಿರಾಮ ಚಿಹ್ನೆಗಳನ್ನು ಬಿಟ್ಟುಬಿಡತಕ್ಕದ್ದು.

**12. 443ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 443ಎ ಪ್ರಕರಣದ, (1)ನೇ ಉಪಪ್ರಕರಣದಲ್ಲಿನ (i)ನೇ ಖಂಡವನ್ನು ಬಿಟ್ಟುಬಿಡತಕ್ಕದ್ದು.

**13. 503ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 503ಬಿ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ,–

(ಎ) "ಬೆಂಗಳೂರು" ಎಂಬ ಪದವನ್ನು ಬಿಟ್ಟುಬಿಡತಕ್ಕದ್ದು;

(ಬಿ) ವಿವರಣೆಯಲ್ಲಿ "ಬೆಂಗಳೂರು" ಎಂಬ ಪದವನ್ನು ಬಿಟ್ಟುಬಿಡತಕ್ಕದ್ದು;

(ii) (4)ನೇ ಉಪಪ್ರಕರಣದಲ್ಲಿ, "ಬೆಂಗಳೂರು" ಎಂಬ ಪದಕ್ಕೆ "ನಗರ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

(iii) (6)ನೇ ಉಪಪ್ರಕರಣದಲ್ಲಿ, "ಬೆಂಗಳೂರು" ಎಂಬ ಪದವನ್ನು ಬಿಟ್ಟುಬಿಡತಕ್ಕದ್ದು;

**14. 506ನೇ ಪ್ರಕರಣದ ತಿದ್ದುಪಡಿ.–** (1) ಮೂಲ ಅಧಿನಿಯಮದ 506ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ,–

(i) (i)ನೇ ಖಂಡದಲ್ಲಿ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು" ಎಂಬ ಪದಗಳಿಗೆ "ಬೆಂಗಳೂರು ಮಹಾನಗರ ಪಾಲಿಕೆಯು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) (ii)ನೇ ಖಂಡದಲ್ಲಿ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ" ಎಂಬ ಪದಗಳು ಬರುವ ಎರಡು ಕಡೆಗಳಲ್ಲಿ "ಬೆಂಗಳೂರು ಮಹಾನಗರ ಪಾಲಿಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(iii) (iii)ನೇ ಖಂಡದಲ್ಲಿ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು" ಎಂಬ ಪದಗಳಿಗೆ "ಬೆಂಗಳೂರು ಮಹಾನಗರ ಪಾಲಿಕೆಯು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**15. ತೊಂದರೆಗಳ ನಿವಾರಣೆಗೆ ಅಧಿಕಾರ.–** ಈ ಅಧಿನಿಯಮದ ಮೂಲಕ ತಿದ್ದುಪಡಿಯಾದಂತೆ ಮೂಲ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಲಾದ ಆದೇಶದ ಮೂಲಕ, ಸಂದರ್ಭಕ್ಕೆ ಅಗತ್ಯವಾಗಬಹುದಾದಂತೆ ಮತ್ತು ತೊಂದರೆಯನ್ನು ನಿವಾರಿಸಲು ತನಗೆ ಅವಶ್ಯಕವೆಂದು ಕಂಡುಬರುವ ಯಾವುದೇ ಕ್ರಮವನ್ನು ಕೈಗೊಳ್ಳಬಹುದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಬೆಂಗಳೂರು ಮಹಾನಗರ ಪಾಲಿಕೆಯ ಜನಸಂಖ್ಯೆಯು ಎಂಭತ್ತು ಲಕ್ಷವನ್ನು ಮೀರಿದೆ. ಆದ್ದರಿಂದ, ರಾಜ್ಯ ಅಥವಾ ಕೇಂದ್ರದ ಯೋಜನೆಗಳು ಕಾರ್ಯಗತಗೊಳ್ಳುವುದನ್ನು ಮೇಲ್ವಿಚಾರಣೆ ಮಾಡುವುದು ಕಷ್ಟಕರವಾಗಿದೆ. ಬೆಂಗಳೂರು ಮಹಾನಗರ ಪಾಲಿಕೆಯ ಸುಗಮ ಆಡಳಿತನಿರ್ವಹಣೆಯ ಉದ್ದೇಶಕ್ಕಾಗಿ, ಸರ್ಕಾರವು ನೇಮಿಸಿದ ತಜ್ಞರ ಸಮಿತಿಯೂ ಸಹ ತನ್ನ ಮಧ್ಯಂತರ ವರದಿಯಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯ ತ್ರಿ–ವಿಭಜನೆಗೆ ಶಿಫಾರಸ್ಸು ಮಾಡಿದೆ. ಆದ್ದರಿಂದ ಬೆಂಗಳೂರು ಮಹಾನಗರ ಪಾಲಿಕೆಯನ್ನು ಎರಡು ಅಥವಾ ಮೂರು ನಗರ ಪಾಲಿಕೆಗಳಾಗಿ ಪುನಾರಚನೆ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ. ಆದಕಾರಣ, ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976ನ್ನು (1977ರ ಕರ್ನಾಟಕ ಅಧಿನಿಯಮ 14) ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಸಿದ್ದರಾಮಯ್ಯ**
ಮುಖ್ಯಮಂತ್ರಿ

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ನಗರಪಾಲಿಕೆಗಳ ಅಧಿನಿಯಮ, 1976ರ**

**(1976ರ ಕರ್ನಾಟಕ ಅಧಿನಿಯಮ 14) ಉದ್ಧೃತ ಭಾಗ**

**XX XX XX**

**3. ನಗರಪಾಲಿಕೆಯ ದೊಡ್ಡದಾದ ನಗರ ಪ್ರದೇಶವನ್ನು ನಿರ್ದಿಷ್ಟಪಡಿಸುವುದು ಮತ್ತು ಸ್ಥಾಪನೆ ಇತ್ಯಾದಿ.–**

**XX XX XX**

(2) XX XX XX

ಪರಂತು, **"**ಬೆಂಗಳೂರು ನಗರ ಪಾಲಿಕೆ**"** ಎಂಬುದನ್ನು **"**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ**"** ಎಂದು ಕರೆಯತಕ್ಕದ್ದು.

**7. ನಗರ ಪಾಲಿಕೆಯ ರಚನೆ.–** (1) ನಗರ ಪಾಲಿಕೆಯು ಇವರುಗಳನ್ನು ಒಳಗೊಂಡಿರತಕ್ಕದ್ದು,–

(ಎ) ಸರ್ಕಾರವು ಅಧಿಸೂಚನೆಯ ಮೂಲಕ ನಿರ್ಧರಿಸಬಹುದಾದಂತೆ ಮೂವತ್ತಕ್ಕಿಂತ ಕಡಿಮೆ ಇಲ್ಲದಷ್ಟು ಮತ್ತು ಎರಡುನೂರಕ್ಕಿಂತ ಹೆಚ್ಚಲ್ಲದಷ್ಟು ಸಂಖ್ಯೆಯ ಚುನಾಯಿತ ಕೌನ್ಸಿಲರುಗಳನ್ನು; ಮತ್ತು

(ಬಿ) ನಗರದ ನಿವಾಸಿಗಳ ಪೈಕಿ ಸರ್ಕಾರವು ನಾಮ ನಿರ್ದೇಶನ ಮಾಡಿದ ಸಂಖ್ಯೆಯ ಸಂದರ್ಭದಲ್ಲಿ,–

(i) ಪೌರಾಡಳಿತದಲ್ಲಿ ಅಥವಾ ಆರೋಗ್ಯ, ನಗರ ಯೋಜನೆ ಅಥವಾ ಶಿಕ್ಷಣಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ವಿಶೇಷ ಜ್ಞಾನ ಮತ್ತು ಅನುಭವ ಹೊಂದಿರುವ ಅಥವಾ;

(ii) ಸಮಾಜ ಸೇವಾ ಕಾರ್ಯಕರ್ತರಾಗಿರುವಂಥ

– ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಂದರ್ಭದಲ್ಲಿ ಕೌನ್ಸಿಲರುಗಳ ಒಟ್ಟು ಸಂಖ್ಯೆಯ ಶೇಕಡ ಹತ್ತಕ್ಕೆ ಮೀರದಷ್ಟು ಮತ್ತು ಇತರ ಮಹಾನಗರ ಪಾಲಿಕೆಗಳ ಸಂದರ್ಭದಲ್ಲಿ ಐದಕ್ಕೆ ಮೀರದಷ್ಟು ವ್ಯಕ್ತಿಗಳನ್ನು

**XX XX XX**

**11. ಸ್ಥಾಯೀ ಸಮಿತಿಗಳು.–** (1) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ಹೊರತುಪಡಿಸಿ ಇತರ ನಗರ ಪಾಲಿಕೆಗಳಲ್ಲಿ ಈ ಮುಂದಿನ ಸ್ಥಾಯೀ ಸಮಿತಿಗಳು ಇರತಕ್ಕದ್ದು, ಎಂದರೆ:–

(ಎ) ತೆರಿಗೆ, ಹಣಕಾಸು ಮತ್ತು ಅಪೀಲು ಸ್ಥಾಯೀ ಸಮಿತಿ;

(ಬಿ) ಸಾರ್ವಜನಿಕ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿ;

(ಸಿ) ನಗರ ಯೋಜನೆ ಮತ್ತು ಸುಧಾರಣಾ ಸ್ಥಾಯೀ ಸಮಿತಿ;

(ಡಿ) ಲೆಕ್ಕಪತ್ರಗಳ ಸ್ಥಾಯೀ ಸಮಿತಿ;

(1ಎ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಈ ಮುಂದಿನ ಸ್ಥಾಯೀ ಸಮಿತಿಗಳು ಇರತಕ್ಕದ್ದು, ಎಂದರೆ:–

(ಎ) ತೆರಿಗೆ ಮತ್ತು ಹಣಕಾಸು ಸ್ಥಾಯೀ ಸಮಿತಿ;

**3. Competent Authority.-** The authority specified in column (3) of the table below shall be the competent authority for transfer of officers specified in column(2) thereof.

**TABLE**

| Sl.No | CADRE | COMPETENT AUTHORITY |
|---|---|---|
| (1) | (2) | (3) |
| 1. | Block Education Officer and equivalent cadre/posts | Principal Secretary to Government (Primary and Secondary Education) Education Department. |
| 2. | Deputy Director and equivalent cadre/posts | Principal Secretary to Government (Primary and Secondary Education) Education Department. |

**4. Preparation for transfers through the process of computerized Counseling.-**

(1) The Transfer of officers through process of computerized counseling shall be done as in the following order of priority, namely:-

(i) transfer of Block Education Officer/equivalent cadre or Deputy Director of public instructions/equivalent cadre other those specified in rule 7 in public interest who has worked in a place for maximum period;

(ii) transfer on request who has worked in a place for minimum period;

(iii) transfer on Health grounds;

(iv) transfer of Husband and wife case;

(2) In exigencies of public interest specified in rule 7, transfer may be affected any time to a place/post as competent authority deems fit.

**5. Transfer through Counseling.-** (1) Transfer of an officer (Block Education Officer/any officer an equivalent cadre/Deputy Director) under these rules shall have to be carried out through the process of computerized counseling, based on seniority list prepared under these rules. Transfer cannot be claimed as a matter of right.

(2) Seniority for purpose of counseling shall be prepared based on the length of the service put in a place or post continuously by an officer.

(3) A person who has put more number of years in a post or place shall be considered as senior to a person who has served less number of years in a place or post.

(4) No officer shall bring political influence for transfer to a particular place. If found so it shall be construed as misconduct.

**6. Transfer on health grounds.-** An officer or his/her wife/Husband or children suffering from any serious ailments as declared by the Director of health department, based on the report of Medical Board if treatment for the same is not available in the place presently working shall be considered for transfer to a place where such treatment is available. However the concerned officer shall have to produce a certificate by the medial board specifically certifying the nature and extent of the ailment and also information about the non-availability of medical treatment for the ailment in the present place of working and the availability of medical treatment for the same in the place where the officer requested for transfer. Failing which, request of such transfer shall not be considered.

**7. Provision to transfer an officer in the public interest.-**Notwithstanding anything contained in these rules the officer who is, undergoing the period of penalty or being prosecuted in the court of law for criminal misconduct or undergoing disciplinary case or cases under the Karnataka Civil Services (Classification, control and appeal) Rules, 1957 shall not be transferred and posted to any executive post. He may be posted to any non-executive post at any time, as the competent authority deems fit.

**8. Criteria to be followed while transferring.-** (1) A Block Education Officer or Deputy Director (Administration) shall not be posted to work in his own district.

(2) An officer who has worked more number of years of service in a non-executive post shall be considered as senior for being posted to a executive post.

(3) An officer who completes "Maximum period" in executive posts, shall be transferred to a non-executive post in public interest.

(4) No officer working under rule-32 of the Karnataka Civil Service rules shall be transferred or posted to a executive post.

(5) Not more than five percent of total cadre strength shall be transferred in a year in public interest excluding cases of transfer on health ground, widows and transfer under rule 7.

(6)In case of married officers where both are Government employees they may be transferred to the same place or nearby place where the other spouse in working.

(7) If no person has opted any particular post the competent authority shall have discretion to fill up that post in public interest.

**9. Penalty.-** Any person who contravenes the provision of these rules shall be liable for disciplinary action under the Karnataka Civil Services (Classification, Control and Appeal) Rules, 1957 by treating it as a misconduct.

By order and in the name of Governor of Karnataka

**J.R. ANNAPURNA**
Under Secretary to Government
Education Department (Committees)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೮) (೩೦೦ ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ– IV-A | ಬೆಂಗಳೂರು, ಶನಿವಾರ, ಮೇ ೦೨, ೨೦೧೫ (ವೈಶಾಖ ೧೨, ಶಕ ವರ್ಷ ೧೯೩೭) | ನಂ. ೪೪೪ |
| Part– IV-A | Bengaluru, Saturday, May 02, 2015 (Vaishakha 12, Shaka Varsha 1937) | No. 444 |


**ಜಲಸಂಪನ್ಮೂಲ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸನೀಇ 117 ಮಸಾವಿ 2014, ಬೆಂಗಳೂರು, ದಿನಾಂಕ: 02ನೇ ಮೇ 2015**

ಕರ್ನಾಟಕ ಕೆರೆ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ವಿಧೇಯಕ, 2014ರ (ಕರ್ನಾಟಕ ಅಧಿನಿಯಮ 32) ಪ್ರಕರಣ 50ರ ಉಪ ಪ್ರಕರಣ 1 ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ರಚಿಸಲು ಉದ್ದೇಶಿಸಿರುವ ಕರ್ನಾಟಕ ಕೆರೆ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರದ ನಿಯಮಾವಳಿ 2015ರ ಕರಡನ್ನು ತಯಾರಿಸಿ, ಅಗತ್ಯಪಡಿಸಲಾದಂತೆ ಪ್ರಕಟಿಸಿ, ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನದೊಳಗೆ ಸಂಬಂಧಪಟ್ಟ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಲು ರಾಜ್ಯಪತ್ರದಲ್ಲಿ ಪ್ರಕಟಿಸಲಾಗುತ್ತಿದೆ.

ಈ ಕರಡು ಕುರಿತು ಮೇಲೆ ತಿಳಿಸಿರುವ ಅವಧಿಯ ಮುಕ್ತಾಯಕ್ಕೆ ಮೊದಲು ಯಾವುದೇ ವ್ಯಕ್ತಿಯಿಂದ ಸ್ವೀಕೃತವಾಗುವ ಯಾವುದೇ ಆಕ್ಷೇಪಣೆ ಅಥವಾ ಸಲಹೆ ಸೂಚನೆಗಳನ್ನು ರಾಜ್ಯ ಸರ್ಕಾರದಿಂದ ಪರಿಗಣಿಸಲಾಗುವುದು. ಆಕ್ಷೇಪಣೆ ಮತ್ತು ಸಲಹೆ ಸೂಚನೆಗಳನ್ನು ಸರ್ಕಾರದ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ), ವಿಕಾಸಸೌಧ, ಬೆಂಗಳೂರು ಇವರಿಗೆ ಹೆಸರಿಸುವುದು.

**ನಿಯಮಾವಳಿಗಳು**

1. **ಹೆಸರು, ಪ್ರಾರಂಭ –** (1) ಈ ನಿಯಮಗಳನ್ನು ಕರ್ನಾಟಕ ಕೆರೆ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ನಿಯಮ, 2015 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ಪರಿಭಾಷೆಗಳು.–** (1) ಈ ನಿಯಮಗಳಲ್ಲಿ ಅನ್ಯಥಾ ಅಗತ್ಯಪಡಿಸಿದ ಹೊರತು,

(ಎ) "ಅಧಿನಿಯಮ" ಎಂದರೆ, ಕರ್ನಾಟಕ ಕೆರೆ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ 2014 (ಕರ್ನಾಟಕ ಅಧಿನಿಯಮ 32)

(ಬಿ) "ನಮೂನೆ" ಎಂದರೆ ಈ ನಿಯಮಗಳಿಗೆ ಅನುಬಂಧಿಸಲಾದ ನಮೂನೆ.

(ಸಿ) "ಅನುಸೂಚಿ" ಎಂದರೆ ಈ ನಿಯಮಗಳಿಗೆ ಅನುಬಂಧಿಸಲಾದ ಅನುಸೂಚಿ.

(2) ಈ ನಿಯಮಗಳಲ್ಲಿ ಬಳಸಿರುವ ಆದರೆ ಪರಿಭಾಷಿಸಿರದ ಪದಗಳು ಮತ್ತು ಪದಾವಳಿಗಳು ಅಧಿನಿಯಮದಲ್ಲಿ ಅವುಗಳಿಗೆ ಕೊಟ್ಟಿರುವ ಅದೇ ಅರ್ಥವನ್ನು ಹೊಂದಿರತಕ್ಕದ್ದು.

3. **ಪ್ರಾಧಿಕಾರದ ಅಧಿಕಾರೇತರ ಸದಸ್ಯರುಗಳ ನೇಮಕಾತಿ ಷರತ್ತುಗಳು ಮತ್ತು ಪಾವತಿಸಬೇಕಾದ ಭತ್ಯೆಗಳು.–** (1) ಸರ್ಕಾರದಿಂದ ಪ್ರಾಧಿಕಾರಕ್ಕೆ ನಾಮ ನಿರ್ದೇಶಿತರಾಗುವ ಸದಸ್ಯರುಗಳು ಸಭೆಗಳಿಗೆ ಹಾಜರಾಗಲು ಕಾಲಕಾಲಕ್ಕೆ ಸರ್ಕಾರದಿಂದ ನಿಗದಿಪಡಿಸುವ ಭತ್ಯೆಗಳನ್ನು ಪಡೆಯಲು ಅರ್ಹರಾಗಿರುತ್ತಾರೆ.

(2) ಅಧಿಕಾರೇತರ ಸದಸ್ಯರ ಅಧಿಕಾರವಧಿ ನಾಮ ನಿರ್ದೇಶನದ ದಿನಾಂಕದಿಂದ 30 ತಿಂಗಳು ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ.

4. **ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯ ಹೆಚ್ಚುವರಿ ಅಧಿಕಾರಿಗಳು, ಕಾರ್ಯಗಳು ಮತ್ತು ಕರ್ತವ್ಯಗಳು.** ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಗಳು ಕೆಳಕಂಡಂತೆ ಹೆಚ್ಚುವರಿ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಹೆಚ್ಚುವರಿ ಕಾರ್ಯಗಳು ಮತ್ತು ಕರ್ತವ್ಯಗಳನ್ನು ನಿರ್ವಹಿಸುವುದು. ಯಾವುವೆಂದರೆ:–

(1) ಪ್ರಾಧಿಕಾರದ ಪ್ರತಿ ಸಭೆಯಲ್ಲಿಯು ಭಾಗವಹಿಸುವುದು.

(2) ಪ್ರತಿ ಸಭೆಯ ನಡವಳಿಯನ್ನು ದಾಖಲಿಸುವುದು ಅಥವಾ ದಾಖಲಿಸಲು ಕ್ರಮಕೈಗೊಳ್ಳುವುದು.

(3) ಪ್ರಾಧಿಕಾರದ ಮುಂದೆ ಮಂಡಿಸುವ ಎಲ್ಲಾ ವಿಷಯಗಳು ಮತ್ತು ಪ್ರಶ್ನೆಗಳು ಅಥವಾ ನಿರ್ಣಯಗಳ ಕುರಿತು ಅವರ ಅಭಿಪ್ರಾಯ ಅಥವಾ ಷರಾಗಳನ್ನು ದಾಖಲಿಸುವುದು.

(4) ಲೆಕ್ಕಪರಿಶೋಧಕರ ಆಕ್ಷೇಪಣೆಗಳಿಗೆ ಪಾಲನಾ ವರದಿಯನ್ನು ಕಳುಹಿಸುವುದು.

(5) ನಮೂನೆ–1 ರಲ್ಲಿ ಕೆರೆಗಳ ಪಟ್ಟಿಯನ್ನು ದಾಖಲಿಸಿ, ನಿರ್ವಹಿಸುವುದು ಮತ್ತು

(6) ಯಾವುದೇ ನ್ಯಾಯಾಲಯದ ಪ್ರಕರಣಗಳು ಬಾಕಿ ಇದ್ದಲ್ಲಿ ಅಂತಹ ಎಲ್ಲಾ ಕೆರೆಗಳ ವಿವರಗಳನ್ನು ಅಂದರೆ ಕೆರೆಗಳ ವಿಸ್ತೀರ್ಣ, ಸ್ಥಳ, ಕೆರೆಗಳ ಉಸ್ತುವಾರಿ ಹೊಂದಿರುವ ಅಧಿಕಾರಿ / ಸಿಬ್ಬಂದಿ ಇತ್ಯಾದಿ ವಿವರಗಳನ್ನು ಪ್ರಾಧಿಕಾರವು ನಿರ್ವಹಿಸುವ ಅಂತರ್ಜಾಲ ತಾಣದಲ್ಲಿ ದಾಖಲಿಸುವುದು.

**5. ಪ್ರಾಧಿಕಾರದ ಸಿಬ್ಬಂದಿ.–**(1) ಪ್ರಾಧಿಕಾರದಲ್ಲಿನ ಹುದ್ದೆಗಳಿಗೆ ರಾಜ್ಯ ಸರ್ಕಾರದ ಮಾಲಿಕತ್ವ ಹಾಗೂ ನಿಯಂತ್ರಣದಲ್ಲಿರುವ ರಾಜ್ಯದ ಯಾವುದೇ ನಾಗರಿಕ ಸೇವೆ / ವಿಶ್ವವಿದ್ಯಾಲಯಗಳು / ಸ್ಥಳೀಯ ಪ್ರಾಧಿಕಾರಗಳು / ಸಾರ್ವಜನಿಕ ಉದ್ದಿಮೆಗಳು / ಶಾಸನಬದ್ಧ ಮಂಡಳಿ / ನಿಗಮಗಳಲ್ಲಿ ಸೇವೆ ಸಲ್ಲಿಸುತ್ತಿರುವ ಸಮಾನ ವೇತನ ಶ್ರೇಣಿ ಮತ್ತು ದರ್ಜೆ ಹೊಂದಿರುವ ಅಧಿಕಾರಿಗಳು / ಸಿಬ್ಬಂದಿಗಳನ್ನು ನಿಯೋಜನೆ ಮೇಲೆ ನೇಮಿಸುವುದು.

(2) ಕರ್ನಾಟಕ ನಾಗರಿಕ ಸೇವಾ ನಿಯಮಗಳು (ಸಾಮಾನ್ಯ ನೇಮಕಾತಿ) ನಿಯಮ, 1977 ಕಾಲ ಕಾಲಕ್ಕೆ ಹೊರಡಿಸುವ ಸರ್ಕಾರದ ಆದೇಶಗಳಂತೆ ನಿಯೋಜನೆಯ ಮೇಲೆ ನೇಮಕಾತಿ ಮಾಡುವುದು.

(3) ಸೇವಾ ಷರತ್ತುಗಳು ನಿಯೋಜನೆಗೆ ಅನ್ವಯಿಸುವ ಕರ್ನಾಟಕ ನಾಗರಿಕ ಸೇವಾ ನಿಯಮಗಳಂತೆ ಇರುತ್ತದೆ.

(4) ಪ್ರಾಧಿಕಾರವು ಮಾಡುವ ಯಾವುದೇ ಮಾರ್ಪಾಡುಗಳು ಮತ್ತು ಅನುಸೂಚಿಯಲ್ಲಿ ತಿಳಿಸಿರುವಂತೆ ಬದಲಾವಣೆಗಳೊಂದಿಗೆ ಕರ್ನಾಟಕ ನಾಗರಿಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರಂತೆ ಶಿಸ್ತು ಪ್ರಕರಣಗಳು ನಿರ್ವಹಿಸುವುದು.

**6. ವೆಚ್ಚ ವಸೂಲಾತಿ.–** ಕೆರೆಗಳನ್ನು ಮೂಲ ಸ್ಥಿತಿಗೆ ಪುನರ್ ಸ್ಥಾಪಿಸುವ ಸಲುವಾಗಿ ನಿರ್ಮಿತಿಗಳನ್ನು ತೆರವುಗೊಳಿಸಲು ತಗಲುವ ವೆಚ್ಚವನ್ನು ಅಥವಾ ಅನಧಿಕೃತ ಅತಿಕ್ರಮಣಕಾರರಿಂದ ತೆರವುಗೊಳಿಸಲು ತಗಲುವ ವೆಚ್ಚವನ್ನು ವಸೂಲಿ ಮಾಡಲು ಬಾಕಿ ಭೂ ಕಂದಾಯದಂತೆ ಅವಶ್ಯಕತೆ ಇರುವಲ್ಲಿ ಮಾರ್ಪಾಡುಗಳೊಂದಿಗೆ ಜಾರಿಯಲ್ಲಿರುವ ಸೂಕ್ತ ನಿಯಮಗಳಂತೆ ವಿಧಿ ವಿಧಾನಗಳನ್ನು ಅಳವಡಿಸಿಕೊಂಡು ಪ್ರಾಧಿಕಾರವು ಕಾರ್ಯಾಚರಣೆ ನಡೆಸುವುದು.

**7. ಪ್ರಾಧಿಕಾರದ ವಾರ್ಷಿಕ ಲೆಕ್ಕಪತ್ರಗಳ ನಿರ್ವಹಣೆ. –** ಸ್ವೀಕೃತಿ ಮತ್ತು ಪಾವತಿ ಲೆಕ್ಕಗಳು, ವಾರ್ಷಿಕ ಲೆಕ್ಕ ತಃಖ್ತೆಗಳನ್ನು ನಿರ್ವಹಿಸುವುದು ಸಾಧ್ಯವಾದಷ್ಟು ಇದನ್ನು ಕರ್ನಾಟಕ ಆರ್ಥಿಕ ಸಂಹಿತೆ ಅನುಸಾರ ನಿರ್ವಹಿಸುವುದು. ಅವಕಾಶವಿಲ್ಲದಿದ್ದಲ್ಲಿ ಇದನ್ನು ಡಬಲ್ ಎಂಟ್ರಿ ಮಾದರಿಯಲ್ಲಿ ನಿರ್ವಹಿಸುವುದು.

**8. ಪ್ರಾಧಿಕಾರದ ವಾರ್ಷಿಕ ವರದಿ.–** ಪ್ರಾಧಿಕಾರದ ವಾರ್ಷಿಕ ವರದಿಯನ್ನು ಸಣ್ಣ ನೀರಾವರಿ ಇಲಾಖೆಯಲ್ಲಿ ಅನುಸರಿಸುತ್ತಿರುವ ವಿಧಿವಿಧಾನಗಳನ್ನು ಅಳವಡಿಸಿಕೊಂಡು ತಯಾರಿಸಿ ಪ್ರಕಟಿಸಲು ಕ್ರಮವಹಿಸುವುದು.

**9. ಪ್ರಾಧಿಕಾರದ ವಾರ್ಷಿಕ ಆಯವ್ಯಯ.–** ಪ್ರಾಧಿಕಾರದ ವಾರ್ಷಿಕ ಆಯವ್ಯಯವನ್ನು ಸಣ್ಣ ನೀರಾವರಿ ಇಲಾಖೆಯಲ್ಲಿ ಅನುಸರಿಸುತ್ತಿರುವಂತೆ ಆಯವ್ಯಯ ನಮೂನೆಯನ್ನು ಅಳವಡಿಸಿಕೊಂಡು ಪ್ರತಿ ವರ್ಷ ಡಿಸೆಂಬರ್ 1 ರೊಳಗಾಗಿ ಸರ್ಕಾರದ ಅನುಮೋದನೆಗೆ ಕಳುಹಿಸುವುದು.

**ಅನುಸೂಚಿ**

{ನಿಯಮ 5(4) ರಂತೆ}

| **ಹುದ್ದೆ** | **ನೇಮಕಾತಿ ಪ್ರಾಧಿಕಾರ** | **ಶಿಸ್ತು ಪ್ರಾಧಿಕಾರ** | **ಅಪೀಲು ಪ್ರಾಧಿಕಾರ** |
|---|---|---|---|
| | | | |

**ನಮೂನೆ–1**

{ನಿಯಮ 4(5) ರಂತೆ}

| **ಕೆರೆಯ ಹೆಸರು (ಇದ್ದಲ್ಲಿ), ಇಲ್ಲದಿದ್ದಲ್ಲಿ** | **ಕೆರೆಯ ವಿಸ್ತೀರ್ಣ** | **ಕೆರೆ ಇರುವ ಸ್ಥಳ / ಜಿಲ್ಲೆ / ತಾಲ್ಲೂಕು / ಹೋಬಳಿ / ಗ್ರಾಮ ಪಂಚಾಯತಿ / ಪಾಲಿಕೆ** |
|---|---|---|
| | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎನ್. ಪಾಟೀಲ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**WATER RESOURCES SECRETARIAT**
**NOTIFICATION**
**No. Sanie 117 Masavi 2014, Bangalore, Dated: 02-05-2015**

The draft of the Karnataka Tank Conservation and Development Authority Rules, 2015 which Government of Karnataka proposes to make in exercise of the powers conferred by sub-section (1) of section 50 of the Karnataka Tank Conservation and Development Authority Act, 2014 (Karnataka Act 32 of 2014) is hereby published as required by the said section of the information of all persons likely to be affected thereby and notice is hereby given that the said draft will be taken into consideration after thirty days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Secretary to Government, Water Resources Department (Minor Irrigation), Vikasa Soudha, Bangalore-560 001.

**RULES**

**1. Title and commencement.-** (1) These rules may be called Karnataka Tank Conservation and Development Authority Rules, 2015.

(2) They shall come into force from the date of their final publication in the official Gazette.

**2. Definitions.-** (1) In these rules, unless the context otherwise requires,-

(a) 'Act' means the Karnataka Tank Conservation and Development Authority Act, 2014 (Karnataka Act 32 of 2014);

(b) 'Form' means a form appended to these rules;

(c) 'Schedule' means a Schedule appended to these rules.

(2) 'Words and expressions' used in these rules but not defined shall have the same meaning assigned to them in the Act.

**3. Term of office and allowelences payable to non-official members of the Authority** (1) The non official Members of the Authority nominated by the Government shall be entitled for such allowances to be fixed by the Government from time to time when they attend the Meetings.

(2) The term of office of the non-official members shall be thirty months from the date of their nomination or as per the next orders of the Government whichever is earlier

**4. Additional Powers, functions and duties of Chief Executive Officer.-** The Chief Executive Officer shall exercise the additional powers and discharge and perform the additional functions and duties specified below, namely:-

(1) to take part in every meeting of the authority;

(2) to draw the proceedings of every meeting of the authority or cause to draw such proceedings;

(3) to record his opinion or remarks on all the issues and Questions or resolutions placed in the meeting of the authority;

(4) to send compliance report on all audit objections;

(5) to cause to maintain a list of tanks in Form-1; and

(6) to cause to host the particulars of all tanks i.e., like the area of the tank, the location, the officer/staff in charge of tank, the pending litigations, if any, in respect of said tank, on the web to be maintained by the authority.

**5. Staff of the Authority.-** (1) The posts in the Authority shall be filled by deputation of the officers/officials having equivalent pay scales and grade, from any of the State Civil Services / Universities / Local Authorities / Public Sector Undertakings / Statutory Boards / Corporations owned and controlled by the State Government.

(2) The appointments on deputation shall be as per the provisions of the Karnataka Civil Services (General Recruitment) Rules, 1977 and any other orders of the Government in force from time to time.

(3) The conditions of service shall be as per the Karnataka Civil Service Rules in respect of deputationists.

(4) The disciplinary proceedings shall be governed by the Karnataka Civil Services (Classification, Control and Appeal) Rules, 1957 subject to such modifications as may be necessary by the Authority and as specified in the Schedule.

**6. Recovery of cost:-** The recovery of cost of removal of construction or expenditure incurred to restore the tank to its original condition from the unauthorized occupants shall be made as arrears of land revenue, after following the procedure prescribed in the relevant rules with necessary modifications wherever required in its operation by the authority.

**7. Maintenance of Annual Statement of Accounts.-** The Receipt and payment Accounts, annual statement of accounts shall be maintained, as for as possible, in accordance with Karnataka Financial code. Where there is no provision it may be prepared in accordance with double entry book keeping.

**8. Annual Report of the authority.-** The annual report of the Authority shall be prepared and published as per the procedure being followed in the Minor Irrigation Department.

**9 Annual Budget.-** The annual budget of the authority shall be prepared as is being done in the Minor Irrigation Department and shall be submitted for approval of the Government by 1st December every year.

**SCHEDULE**
**[see rule 5(4)]**

| Designation | Appointing Authority | Disciplinary Authority | Appellate Authority |
|---|---|---|---|
| | | | |

**FORM-1**
**[see rule 4(5)]**

| Name of the Tank (if any) If there is no name | Area of the tank | Location of the Tank / District / Taluk / Hobli / Gram Panchayat / Ward |
|---|---|---|
| | | |

By Order and in the name of the Governor of Karnataka,

**B.N. PATIL**
Under Secretary to Government
Water Resources Department (Minor Irrigation)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೮) (೫೦೦ ಪ್ರತಿಗಳು)

. fdRNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– IV-A | ಬೆಂಗಳೂರು, ಶನಿವಾರ, ಮೇ ೦೨, ೨೦೧೫ (ವೈಶಾಖ ೧೨, ಶಕ ವರ್ಷ ೧೯೩೭) | ನಂ. ೪೪೫ |
|---|---|---|
| **Part– IV-A** | **Bengaluru, Saturday, May 02, 2015 (Vaishakha 12, Shaka Varsha 1937)** | **No. 445** |

**ಸಂಸದೀಯ ವ್ಯವಹಾರಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 10 ಶಾಸನ 2015, ಬೆಂಗಳೂರು, ದಿನಾಂಕ: 02.05.2015**

ಕನ್ನಡ ಭಾಷಾ ಕಲಿಕೆ ವಿಧೇಯಕ, 2015ಕ್ಕೆ 2015ರ ಏಪ್ರಿಲ್ ತಿಂಗಳ ಇಪ್ಪತ್ತೊಂಬತನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2015ರ ಕರ್ನಾಟಕ ಅಧಿನಿಯಮ ಸಂಖ್ಯೆ:22 ಎಂಬುದಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2015 ರ ಕರ್ನಾಟಕ ಅಧಿನಿಯಮ ಸಂಖ್ಯೆ: 22**

(2015 ರ ಮೇ ಎರಡನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕನ್ನಡ ಭಾಷಾ ಕಲಿಕೆ ಅಧಿನಿಯಮ, 2015**

(2015 ರ ಏಪ್ರಿಲ್ ಇಪ್ಪತ್ತೊಂಬತನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ರಾಜ್ಯದಲ್ಲಿನ ಎಲ್ಲಾ ಶಾಲೆಗಳಲ್ಲಿ ಕನ್ನಡವನ್ನು ಒಂದು ಭಾಷೆಯನ್ನಾಗಿ ಕಲಿಯುವುದನ್ನು ಉಪಬಂಧಿಸಲು ಮತ್ತು ಖಚಿತಪಡಿಸಿಕೊಳ್ಳಲು ಒಂದು ಅಧಿನಿಯಮ.

ರಾಜ್ಯದಲ್ಲಿ ಎಲ್ಲಾ ಶಾಲೆಗಳಲ್ಲಿ 1ರಿಂದ 10ನೇ ತರಗತಿಗಳವರೆಗೂ ವ್ಯಾಸಂಗ ಮಾಡುತ್ತಿರುವ ಎಲ್ಲಾ ವಿದ್ಯಾರ್ಥಿಗಳಿಗೆ 2015–16ನೇ ಶೈಕ್ಷಣಿಕ ವರ್ಷದಿಂದ ಹಂತಹಂತವಾಗಿ ಕನ್ನಡವನ್ನು ಒಂದು ಭಾಷೆಯನ್ನಾಗಿ ಕಲಿಯುವುದನ್ನು ಖಚಿತಪಡಿಸಿಕೊಳ್ಳಲು ಕರ್ನಾಟಕ ಸರ್ಕಾರವು ಒಂದು ನೀತಿ ನಿರ್ಣಯವನ್ನು ತೆಗೆದುಕೊಂಡಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕನ್ನಡ ಭಾಷಾ ಕಲಿಕೆ ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**– ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಶೈಕ್ಷಣಿಕ ವರ್ಷ" ಎಂದರೆ, ಜೂನ್ ಮೊದಲ ದಿನಾಂಕದಿಂದ ಪ್ರಾರಂಭವಾಗುವ ವರ್ಷ;

(ಬಿ) "ಸಕ್ಷಮ ಪ್ರಾಧಿಕಾರಿ" ಎಂದರೆ, 4ನೇ ಪ್ರಕರಣದ ಅಡಿಯಲ್ಲಿ ಸರ್ಕಾರವು ನೇಮಿಸಿದ ಸಕ್ಷಮ ಪ್ರಾಧಿಕಾರಿ;

(ಸಿ) "ಸರ್ಕಾರ" ಎಂದರೆ, ರಾಜ್ಯ ಸರ್ಕಾರ;

(ಡಿ) "ನಿಯಮಿಸಲಾದ" ಎಂದರೆ, ನಿಯಮಗಳ ಮೂಲಕ ನಿಯಮಿಸಲಾದುದು;

(ಇ) "ಶಾಲೆ" ಎಂದರೆ,–

(i) ರಾಜ್ಯ ಸರ್ಕಾರ ಅಥವಾ ಸ್ಥಳೀಯ ನಿಕಾಯಗಳಿಂದ ಸ್ಥಾಪಿತವಾದ ಮತ್ತು ನಿರ್ವಹಿಸಲ್ಪಡುತ್ತಿರುವ ಯಾವುದೇ ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ, ಪ್ರೌಢ ಶಾಲೆ ಅಥವಾ ಉನ್ನತ ಪ್ರೌಢ ಶಾಲೆ; ಅಥವಾ

(ii) ರಾಜ್ಯ ನಿಧಿಯಿಂದ ಅನುದಾನವನ್ನು ಪಡೆಯುತ್ತಿರಲಿ ಅಥವಾ ಇಲ್ಲದಿರಲಿ, ಭಾರತ ಸಂವಿಧಾನದ 30ನೇ ಅನುಚ್ಛೇದದ (1)ನೇ ಖಂಡದ ಅಡಿಯಲ್ಲಿ ಸ್ಥಾಪಿತವಾಗಿರುವ ಮತ್ತು ನಿರ್ವಹಿಸುತ್ತಿರುವ ಅಲ್ಪಸಂಖ್ಯಾತರ ಶಾಲೆಯನ್ನು ಒಳಗೊಂಡಂತೆ ಯಾವುದೇ ಖಾಸಗಿ ಶೈಕ್ಷಣಿಕ ಏಜೆನ್ಸಿಯು ಸ್ಥಾಪಿಸಿರುವ ಮತ್ತು ನಿರ್ವಹಿಸುತ್ತಿರುವ ಯಾವುದೇ ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ, ಪ್ರೌಢ ಶಾಲೆ ಅಥವಾ ಉನ್ನತ ಪ್ರೌಢ ಶಾಲೆ; ಅಥವಾ

(iii) ರಾಜ್ಯದ ನಿಧಿಯಿಂದ ಅನುದಾನವನ್ನು ಪಡೆಯುತ್ತಿರಲಿ ಅಥವಾ ಇಲ್ಲದಿರಲಿ, ಭಾರತ ಸಂವಿಧಾನದ 30ನೇ ಅನುಚ್ಛೇದದ (1)ನೇ ಖಂಡದ ಅಡಿಯಲ್ಲಿ ಸ್ಥಾಪಿತವಾಗಿರುವ ಮತ್ತು ನಿರ್ವಹಿಸುತ್ತಿರುವ ಅಲ್ಪಸಂಖ್ಯಾತರ ಶಾಲೆಯನ್ನು ಒಳಗೊಂಡಂತೆ ಯಾವುದೇ ಪೂರ್ವಪ್ರಾಥಮಿಕ (ನರ್ಸರಿ) ಮತ್ತು ಪ್ರಾಥಮಿಕ ಶಾಲೆ, ಮೆಟ್ರಿಕ್ಯುಲೇಷನ್ ಶಾಲೆ, ಆಂಗ್ಲೋ ಇಂಡಿಯನ್ ಶಾಲೆ ಅಥವಾ ಓರಿಯಂಟಲ್ ಶಾಲೆ; ಅಥವಾ

(iv) ಈ ಸಂಬಂಧದಲ್ಲಿ ಸರ್ಕಾರವು ಅಧಿಸೂಚಿಸಬಹುದಾದ ಅಂಥ ಇತರ ಶಾಲೆ.

**ವಿವರಣೆ.–** ಈ ಖಂಡದ ಉದ್ದೇಶಕ್ಕಾಗಿ,–

(1) ಪೂರ್ವ ಪ್ರಾಥಮಿಕದಿಂದ ಹತ್ತನೇ ತರಗತಿಯವರೆಗೆ ಯಾವುದೇ ತರಗತಿಗಳನ್ನು ಹೊಂದಿರುವ ಒಂದು ಶಾಲೆಯನ್ನು ಈ ಅಧಿನಿಯಮದ ಉದ್ದೇಶಕ್ಕಾಗಿ ಒಂದು ಶಾಲೆ ಎಂದು ಪರಿಗಣಿಸಲಾಗಿದೆ.

(2) ಈ ಅಧಿನಿಯಮದಲ್ಲಿ ಉಪಯೋಗಿಸಿರುವ ಆದರೆ ಪರಿಭಾಷಿಸದಿರುವ ಪದ ಮತ್ತು ಪದಾವಳಿಗಳು ಕರ್ನಾಟಕ ಶಿಕ್ಷಣ ಅಧಿನಿಯಮ, 1983ರಲ್ಲಿ (1995ರ ಕರ್ನಾಟಕ ಅಧಿನಿಯಮ 1), ಅವುಗಳಿಗೆ ಗೊತ್ತುಪಡಿಸಿದ ಅರ್ಥವನ್ನು ಹೊಂದಿರತಕ್ಕದ್ದು.

**3. ಕಡ್ಡಾಯ ಭಾಷೆಯಾಗಿ ಕನ್ನಡ.–** (1) ರಾಜ್ಯದಲ್ಲಿನ ಎಲ್ಲಾ ಶಾಲೆಗಳಲ್ಲಿ, ಎಲ್ಲಾ ತರಗತಿಗಳಲ್ಲಿ ಪ್ರಥಮ ಭಾಷೆಯಾಗಿ ಆಗಲೀ ಅಥವಾ ದ್ವಿತೀಯ ಭಾಷೆಯಾಗಿ ಆಗಲೀ ಕನ್ನಡ ಭಾಷೆಯನ್ನು ಕಡ್ಡಾಯ ಭಾಷೆಯನ್ನಾಗಿ ಹಂತಹಂತವಾಗಿ ಕಲಿಸತಕ್ಕದ್ದು.

(2) ಈಗ ಯಾವ ಶಾಲೆಗಳಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಕಲಿಸಲಾಗುತ್ತಿಲ್ಲವೋ, ಆ ಶಾಲೆಗಳಲ್ಲಿ 2015–16ನೇ ಶೈಕ್ಷಣಿಕ ವರ್ಷದಿಂದ 1ನೇ ತರಗತಿಯಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಆರಂಭಿಸತಕ್ಕದ್ದು ಹಾಗೂ 2016–17ನೇ ಶೈಕ್ಷಣಿಕ ವರ್ಷದಲ್ಲಿ 1ನೇ ಮತ್ತು 2ನೇ ತರಗತಿಗಳಲ್ಲಿ ಹಾಗೂ ಇದೇ ರೀತಿಯಾಗಿ 10ನೇ ತರಗತಿಯವರೆಗೆ ಹಂತಹಂತವಾಗಿ ವಿಸ್ತರಿಸತಕ್ಕದ್ದು.

(3) ಎಲ್ಲಾ ಶಾಲೆಗಳು ಕಡ್ಡಾಯವಾಗಿ ಕನ್ನಡವನ್ನು ಪ್ರಥಮ ಭಾಷೆ ಅಥವಾ ದ್ವಿತೀಯ ಭಾಷೆಯಾಗಿ ಕಲಿಸಲು ರಾಜ್ಯ ಸರ್ಕಾರದಿಂದ ನಿಯಮಿಸಲಾದ ಪಠ್ಯಪುಸ್ತಕಗಳನ್ನು ಅನುಸರಿಸತಕ್ಕದ್ದು.

(4) ಯಾವೊಬ್ಬ ವಿದ್ಯಾರ್ಥಿಯು ಆತನ ಮಾತೃಭಾಷೆಯನ್ನು (ಕನ್ನಡವನ್ನು ಹೊರತುಪಡಿಸಿ) ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಆಯ್ಕೆ ಮಾಡಿಕೊಳ್ಳದಿದ್ದರೆ ತೃತೀಯ ಭಾಷೆಯಾಗಿ ತನ್ನ ಮಾತೃಭಾಷೆಯನ್ನು ವ್ಯಾಸಂಗ ಮಾಡಬಹುದು.

**4. ಸಕ್ಷಮ ಪ್ರಾಧಿಕಾರಿ.–** (1) ಸರ್ಕಾರವು, ಅಧಿಸೂಚನೆಯ ಮೂಲಕ ಮತ್ತು ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಶಿಕ್ಷಣ ಇಲಾಖೆಯ ಯಾವೊಬ್ಬ ಅಧಿಕಾರಿಯನ್ನು ಸಕ್ಷಮ ಪ್ರಾಧಿಕಾರಿಯನ್ನಾಗಿ ನೇಮಿಸಬಹುದು ಹಾಗೂ ಬೇರೆಬೇರೆ ಪ್ರದೇಶಗಳಿಗೆ ಬೇರೆಬೇರೆ ಸಕ್ಷಮ ಪ್ರಾಧಿಕಾರಿಗಳನ್ನು ನೇಮಿಸಬಹುದು.

(2) ಸಕ್ಷಮ ಪ್ರಾಧಿಕಾರಿಯು, ನಿಯಮಿಸಬಹುದಾದ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**5. ಸಕ್ಷಮ ಪ್ರಾಧಿಕಾರಿಯು ಸಾರ್ವಜನಿಕ ನೌಕರನಾಗಿರುವುದು.–** 4ನೇ ಪ್ರಕರಣದ ಅಡಿಯಲ್ಲಿ ನೇಮಿಸಲಾದ ಸಕ್ಷಮ ಪ್ರಾಧಿಕಾರಿಯನ್ನು ಭಾರತೀಯ ದಂಡ ಸಂಹಿತೆಯ (1860ರ ಕೇಂದ್ರ ಅಧಿನಿಯಮ XLV) 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರನೆಂದು ಭಾವಿಸತಕ್ಕದ್ದು.

**6. ನಿರ್ದೇಶನಗಳನ್ನು ನೀಡಲು ಸರ್ಕಾರದ ಅಧಿಕಾರ.–** (1) ಸರ್ಕಾರವು, ಸಾರ್ವಜನಿಕ ಹಿತ ದೃಷ್ಟಿಯಿಂದ, ಆದೇಶದ ಮೂಲಕ, ಸದರಿ ಆದೇಶದಲ್ಲಿ ನಿರ್ದಿಷ್ಟಪಡಿಸಿರುವ ಯಾವುದೇ ಪ್ರಕರಣದ ವಿಚಾರಣೆ ಮಾಡುವಂತೆ ಅಥವಾ ಈ ಅಧಿನಿಯಮದ ಅಡಿಯಲ್ಲಿ ಸೂಕ್ತ ವ್ಯವಹರಣೆಗಳನ್ನು ಕೈಗೊಳ್ಳುವಂತೆ ಸಕ್ಷಮ ಪ್ರಾಧಿಕಾರಿಗೆ ನಿರ್ದೇಶಿಸಬಹುದು ಮತ್ತು ಸಕ್ಷಮ ಪ್ರಾಧಿಕಾರಿಯು ತಾನು ಮಾಡಿದ ವಿಚಾರಣೆಯ ಅಥವಾ ಕೈಗೊಂಡ ವ್ಯವಹರಣೆಗಳ ಫಲಿತಾಂಶವನ್ನು ನಿಯಮಿಸಬಹುದಾದ ಅಂಥ ಅವಧಿಯೊಳಗೆ ಸರ್ಕಾರಕ್ಕೆ ವರದಿ ಮಾಡತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಸಕ್ಷಮ ಪ್ರಾಧಿಕಾರಿಯಿಂದ ವರದಿಯನ್ನು ಸ್ವೀಕರಿಸಿದ ಮೇಲೆ ಸರ್ಕಾರವು ತಾನು ಸೂಕ್ತವೆಂದು ಭಾವಿಸುವ ಅಂಥ ನಿರ್ದೇಶನವನ್ನು ನೀಡತಕ್ಕದ್ದು ಹಾಗೂ ಅಂಥ ನಿರ್ದೇಶನವು ಅಂತಿಮ ಹಾಗೂ ಬದ್ಧವಾಗಿರತಕ್ಕದ್ದು.

**7. ಸದ್ಭಾವನೆಯಿಂದ ಕೈಗೊಂಡ ಕ್ರಮದ ಸಂರಕ್ಷಣೆ.–** ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ಮಾಡಲಾದ ಯಾವುದೇ ನಿಯಮ ಅಥವಾ ಆದೇಶದ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ಸಕ್ಷಮ ಪ್ರಾಧಿಕಾರಿ, ಸರ್ಕಾರ ಅಥವಾ ಅದರ ಅಧಿಕಾರಿಗಳ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಕಾನೂನು ವ್ಯವಹರಣೆಗಳನ್ನು ಹೂಡತಕ್ಕದ್ದಲ್ಲ.

**8. ನಿಯಮಗಳನ್ನು ರಚಿಸಲು ಅಧಿಕಾರ.–** (1) ಸರ್ಕಾರವು, ಅಧಿಸೂಚನೆಯ ಮೂಲಕ ಪೂರ್ವ ಪ್ರಕಟಣೆಯ ತರುವಾಯ ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿದ್ದಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ಅದರ ನಿಕಟ ತರುವಾಯದ ಅಧಿವೇಶನ ಮುಕ್ತಾಯವಾಗುವ ಮೊದಲು

ಉಭಯ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಬೇಕೆಂದು ಒಪ್ಪಿದರೆ ಅಥವಾ ಯಾವುದೇ ನಿಯಮ ರಚಿಸಬಾರದೆಂದು ಒಪ್ಪಿದರೆ, ಆ ತರುವಾಯ ಸಂದರ್ಭಾನುಸಾರವಾಗಿ ನಿಯಮವು ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಯಾವುದೇ ಪರಿಣಾಮ ಹೊಂದಿರತಕ್ಕದ್ದಲ್ಲ. ಆದಾಗ್ಯೂ ಅಂಥ ಯಾವುದೇ ಮಾರ್ಪಾಟು ಅಥವಾ ರದ್ಧತಿಯು ಆ ನಿಯಮದ ಅಡಿಯಲ್ಲಿ ಮೊದಲು ಮಾಡಿದ ಯಾವುದೇ ಕೃತ್ಯದ ಮಾನ್ಯತೆಗೆ ಬಾಧಕವಾಗತಕ್ಕದ್ದಲ್ಲ.

**9. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದಲ್ಲಿ, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಲಾದ ಆದೇಶದ ಮೂಲಕ ಸರ್ಕಾರವು ಸದರಿ ತೊಂದರೆಯನ್ನು ನಿವಾರಿಸಲು ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ ಅಂಥ ಉಪಬಂಧಗಳನ್ನು ರಚಿಸಬಹುದು.

ಪರಂತು, ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಎರಡು ವರ್ಷಗಳ ಅವಧಿಯು ಮುಕ್ತಾಯಗೊಂಡ ತರುವಾಯ ಯಾವುದೇ ಅಂಥ ಆದೇಶವನ್ನು ಹೊರಡಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಭಾ.ಭೀ. ಪತ್ತಾರ**
ಸರ್ಕಾರದ ವಿಶೇಷ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (250 ಪ್ರತಿಗಳು)**

. fdRNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– IV-A | ಬೆಂಗಳೂರು, ಶನಿವಾರ, ಮೇ ೦೨, ೨೦೧೫ (ವೈಶಾಖ ೧೨, ಶಕ ವರ್ಷ ೧೯೩೭) | ನಂ. ೪೪೬ |
| **Part– IV-A** | **Bengaluru, Saturday, May 02, 2015 (Vaishakha 12, Shaka Varsha 1937)** | **No. 446** |


**PARLIAMENTARY AFFAIRS SECRETARIAT**

**NOTIFICATION**

**NO. SAMVYASHAE 10 SHASANA 2015, Bengaluru, dated: 02.05.2015**

Ordered that the translation of ಕನ್ನಡ ಭಾಷಾ ಕಲಿಕೆ ಅಧಿನಿಯಮ, 2015 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ:22) in the English language, be published as authorised by the Governor of Karnataka under clause (3) of Article 348 of the constitution of India in the Karnataka Gazette for general information.

The following translation of ಕನ್ನಡ ಭಾಷಾ ಕಲಿಕೆ ಅಧಿನಿಯಮ, 2015 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ:22) in the English language is published in the Official Gazette under the authority of the Governor of Karnataka under clause (3) of Article 348 of the Constitution of India.

**KARNATAKA ACT NO. 22 OF 2015**

(First Published in the Karnataka Gazette Extra-ordinary on the Second day of May, 2015)

**THE KANNADA LANGUAGE LEARNING ACT, 2015**

(Received the assent of the Governor on the Twenty Ninth day of April, 2015)

An Act to provide and ensure learning of Kannada as one of the language in all schools in the State of Karnataka.

Whereas, a policy decision has been taken by the Government of Karnataka to ensure that all students studying in standards I to X in all schools in the State shall learn Kannada as one of the language in a phased manner from the academic year 2015-16.

Be it enacted by the Karnataka State Legislature in the sixty-sixth year of the Republic of India as follows:-

**1. Short title and commencement.-** (1) This Act may be called the Kannada Language Learning Act, 2015.

(2) It shall come into force on such date as the Government may, by notification, appoint.

**2. Definitions.-** In this Act, unless the context otherwise requires,-

(a) "Academic year" means the year commencing on the first day of June;

(b) "Competent authority" means the competent authority appointed by the Government under section 4;

(c) "Government" means the State Government;

(d) "Prescribed" means prescribed by the rules;

(e) "School" means,-

(i) any Primary School, Middle School, High School or Higher Secondary School established and maintained by the State Government or Local Bodies; or

(ii) any Primary School, Middle School, High School or Higher Secondary School established and administered or maintained by any private educational agency including minority school established and administered under clause (1) of Article 30 of the Constitution of India, whether receiving aid out of the State fund or not; or

(iii) any Nursery and Primary School, Matriculation School, Anglo-Indian School or Oriental School including minority school established and administered under clause (1) of Article 30 of the Constitution of India, whether receiving aid out of the State fund or not; or

(iv) such other School as may be notified by the Government in this behalf.

**Explanation. -** For the purpose of this clause,-

(1) A School having any of classes from Nursery to X standard is considered a school for the purpose of this Act.

(2) Words and expressions used in this Act but not defined shall have the same meaning assigned to it in the Karnataka Education Act, 1983 (Karnataka Act 1 of 1995).

**3. Kannada as a Compulsory Language.-** (1) Kannada language shall be taught as a compulsory language in all classes, in all schools in the State, either as a first language or as a second language in the phased manner.

(2) In those Schools which are not teaching Kannada as a first and second language, as of now, shall introduce Kannada as first or second language in Standard-I from the academic year 2015-16 and in the standard I and II in the academic year 2016-17 and in the phased manner shall be extended upto $X^{th}$ standard in a like manner.

(3) Every School shall follow Text Books Prescribed by the State Government for teaching Kannada as First language or Second language compulsorily.

(4) A student who has not opted his mother tongue (other than Kannada) as First or Second Language may study his mother tongue as Third Language.

**4. Competent Authority.-** (1) The Government may, by notification, appoint any officer of the Education Department not below the rank of Deputy Director of Public Instructions to be the Competent Authority for the purposes of carrying out the provisions of this Act and the rules made there under and different competent authorities may be appointed for different areas.

(2) The Competent Authority shall exercise such powers and perform such functions as may be prescribed.

**5. Competent Authority to be public servant.-** The competent authority appointed under section 4 shall be deemed to be public servant within the meaning of section 21 of the Indian Penal Code (Central Act XLV of 1860).

**6. Power of the Government to give direction.-** (1) The Government may, in public interest, by order, direct the competent authority to make an enquiry or to take appropriate proceedings under this Act in any case specified in the Order and the competent authority shall report to the Government the result of the enquiry made or the proceedings taken by him within such period as may be prescribed.

(2) On receipt of the report from the competent authority under sub-section (1), the Government shall give such direction as it deems fit and such direction shall be final and binding.

**7. Protection of action taken in good faith.-** No suit, prosecution or other legal proceedings shall lie against the competent authority, Government or its officers for anything which is in good faith done or intended to be done under this Act or any rule or order made there under.

**8. Power to make rules.-** (1) The Government may, by notification, after previous publication make rules for carrying out the purposes of this Act.

(2) Every rule made under this Act shall be laid as soon as may be after it is made before each House of the State Legislature while it is in session for a total period of thirty days which may be comprised in one session or in two or more successive sessions, and if, before the

expiry of the session immediately following the session or the successive sessions aforesaid, both Houses agree in making any modification in the rule or both Houses agree that the rule shall not be made, the rule shall thereafter have effect only in such modified form or be of no effect, as the case may be, so however, that any such modification or annulment shall be without prejudice to the validity of anything previously done under that rule.

**9. Power to remove difficulties.-** If any difficulty arises in giving effect to the provisions of this Act, the Government may, by Order published in the official Gazette, make such provisions, as appears to it to be necessary or expedient for removing the difficulty.

Provided that no such order shall be made after the expiry of a period of two years from the date of commencement of this Act.

The above translation of ಕನ್ನಡ ಭಾಷಾ ಕಲಿಕೆ ಅಧಿನಿಯಮ, 2015 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ: 22) be published in the Official Gazette under clause (3) of Article 348 of the Constitution of India.

**VAJUBHAI VALA**
**GOVERNOR OF KARNATAKA**

By Order and in the name of the Governor of Karnataka

**B.B. Pattar**
Special Secretary to Government
Department of Parliamentary Affairs

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (250 ಪ್ರತಿಗಳು)

. fdRNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– IV-A | ಬೆಂಗಳೂರು, ಶನಿವಾರ, ಮೇ ೦೨, ೨೦೧೫ (ವೈಶಾಖ ೧೨, ಶಕ ವರ್ಷ ೧೯೩೭) | ನಂ. ೪೪೯ |
|---|---|---|
| **Part– IV-A** | **Bengaluru, Saturday, May 02, 2015 (Vaishakha 12, Shaka Varsha 1937)** | **No. 449** |

**ಸಂಸದೀಯ ವ್ಯವಹಾರಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 40 ಶಾಸನ 2014, ಬೆಂಗಳೂರು, ದಿನಾಂಕ: 02.05.2015.**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ (ತಿದ್ದುಪಡಿ) ವಿಧೇಯಕ, 2015ಕ್ಕೆ 2015ರ ಏಪ್ರಿಲ್ ತಿಂಗಳ ಇಪ್ಪತ್ತೊಂಬತ್ತನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2015ರ ಕರ್ನಾಟಕ ಅಧಿನಿಯಮ ಸಂಖ್ಯೆ:20 ಎಂಬುದಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2015ರ ಕರ್ನಾಟಕ ಅಧಿನಿಯಮ ಸಂಖ್ಯೆ: 20**

(2015ರ ಮೇ ಎರಡನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ (ತಿದ್ದುಪಡಿ) ಅಧಿನಿಯಮ, 2015**

(2015ರ ಏಪ್ರಿಲ್ ಇಪ್ಪತ್ತೊಂಬತ್ತನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನುಪಡೆಯಲಾಗಿದೆ)

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ನ್ನು (2000ರ ಕರ್ನಾಟಕ ಅಧಿನಿಯಮ 28) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ, ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**–(1) ಈ ಅಧಿನಿಯಮವನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ (ತಿದ್ದುಪಡಿ) ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು, ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 4ನೇ ಪ್ರಕರಣದ ತಿದ್ದುಪಡಿ.**– ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ (2000ರ ಕರ್ನಾಟಕ ಅಧಿನಿಯಮ 28) 4ನೇ ಪ್ರಕರಣದ (ಇಇ) ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಇಇಇ) ಐದು ಲಕ್ಷ ರೂಪಾಯಿಗಳಿಗೆ ಮೀರದ ಮೌಲ್ಯದ ಕುಡಿಯುವ ನೀರಿನ ಸ್ಕೀಮುಗಳ ವಿದ್ಯುಧೀಕರಣದ ಮೂಲ ಸೌಲಭ್ಯ ಕಾಮಗಾರಿಗಳಿಗಾಗಿ, ರಾಜ್ಯದ ಸಂಚಿತ ನಿಧಿಯಿಂದ ಅನುದಾನವನ್ನು ಸ್ವೀಕರಿಸುವ ಸಂಗ್ರಹಣಾ ಘಟಕದ ಮೂಲಕ ಸಂಗ್ರಹಣೆಯನ್ನು ಮಾಡಲಾಗಿದ್ದ ಸಂದರ್ಭದಲ್ಲಿ;"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾ.ಭೀ. ಪತ್ತಾರ**
ಸರ್ಕಾರದ ಕಾರ್ಯದರ್ಶಿ(ಪ್ರ)
ಸಂಸದೀಯ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೩) (೨೫೦ ಪ್ರತಿಗಳು)